ಕೊಡುಗೆ : ಕೆ. ಎಂ. ರಾಮಚಂದ್ರ


# ಪಂಚಮ

ಸಂಪುಟ : 9 ಜೂನ್–ಜುಲೈ 1985 ಬೆಲೆ : 1-00 ಸಂಚಿಕೆ : 5-15


## ಅರ್ಹತೆ, ರಾಜೀವಗಾಂಧಿ ಮತ್ತು ಮೀಸಲಾತಿ

ಗುಜರಾತಿನ ಮುಖ್ಯ ಮಂತ್ರಿ ಪದಚ್ಯುತರಾದ ಮೇಲೂ ಮೀಸಲಾತಿ ವಿರೋಧಿ ಚಳುವಳಿ ನಿಲ್ಲುವ ಸೂಚನೆ ಕಾಣುತ್ತಿಲ್ಲ. ಬದಲಿಗೆ, ಸೋಲಂಕಿ ಸೋಲು ಮೀಸಲಾತಿ ವಿರೋಧಿಗಳಿಗೆ ಕುಮ್ಮಕ್ಕನ್ನೇ ಕೊಟ್ಟಿದೆ. ಈ ಎಲ್ಲ ಕುಮ್ಮಕ್ಕುಗಳ ಮೂಲ : ಅರ್ಹತೆಯ ಆಧಾರದ ಮೇಲೆಪುಟ್ಟಿರುವ ರಾಜೀವ ಗಾಂಧಿ, ಎನ್ನುವುದು ಈಗ ಜಗಜ್ಜಾಹೀರಾಗಿರುವ ವಿಚಾರ.

ದಲಿತರು ಎಂದೂ "ನಾವು ಅನರ್ಹರು ಆದ್ದರಿಂದ ಮೀಸಲಾತಿ ಬೇಕು" ಎಂದು ಕೇಳಿಲ್ಲ. ಬದಲಿಗೆ "ನಮಗೆ ಅರ್ಹತೆ ಇದ್ದಾಗ್ಯೂ ಜಾತೀಯತೆಯಿಂದಾಗಿ ಅವಕಾಶಗಳಿಲ್ಲ. ಆದ್ದರಿಂದ ಮೀಸಲಾತಿಬೇಕು" ಎಂದು ಕೇಳಿದ್ದಾರೆ. ಇದನ್ನು ರಾಜೀವ ಗಾಂಧಿಯಾದಿಯಾಗಿ ಅಸೂಯಪರವಾದ ಮೀಸಲಾತಿ ವಿರೋಧಿಗಳೆಲ್ಲ ಕೂಡಲೇ ಮನಗಾಣಬೇಕು. ಇಲ್ಲದಿದ್ದಲ್ಲಿ ಈಗ ಎಚ್ಚೆತ್ತಿರುವ ದಲಿತರು ಈ ನೆಲದಲ್ಲಿ ನಿಜವಾದ ಅರ್ಹರು ಯಾರು? ಎನ್ನುವುದನ್ನು ಇಷ್ಟರಲ್ಲೇ ಇವರೆಲ್ಲರಿಗೂ ಮನಗಾಣಿಸಲಿದ್ದಾರೆ. ಈ ವರ್ಷದ ಪಿ.ಯು.ಸಿ. ಪರೀಕ್ಷೆಯಲ್ಲಿ ಪ್ರಥಮ ಸ್ಥಾನಗಳಿಸಿರುವ ನಿವೇದಿತಾ ಆರ್. ಕೆಳವಾಡಿ, ಮೌಂಟ್ ಕಾರ್ಮೆಲ್ ಕಾಲೇಜು, ಬೆಂಗಳೂರು ಡಿ. ಭಾರತಿ, ಹಸ್ನತ್ ಕಾಲೇಜ್ ಫಾರ್ ವುಮನ್ ಬೆಂಗಳೂರು– ಎಂ. ಗಿರೀಶ್ ಚಂದ್ರ, ನ್ಯಾಷನಲ್ ಕಾಲೇಜು, ಬೆಂಗಳೂರು ಇವರುಗಳು ಈ 'ಮನಗಾಣಿಸುವ' ಎಚ್ಚರಿಕೆಯನ್ನು ಮೀಸಲಾತಿ ವಿರೋಧಿಗಳಿಗೆ ಕೊಟ್ಟಿರುವುದಕ್ಕಾಗಿ ಪಂಚಮವು ಈ ವಿದ್ಯಾರ್ಥಿಗಳನ್ನು ಅಭಿನಂದಿಸುತ್ತದೆ.

## ಪ್ರಾಣ ಪಣ ಇಟ್ಟು ದಲಿತ ನೌಕರರೊಬ್ಬರ ಸತ್ಯಾಗ್ರಹ

ಬಿ. ಕೆ. ಮೂರ್ತೀಶ್ವರಯ್ಯ

ಕರ್ನಾಟಕದಲ್ಲಿ 'ಸರಕಾರ' ಎಂಬ ಕೂಡಲೆ 'ವಿಧಾನ ಸೌಧ' ನೆನಪಾಗುತ್ತದೆ. 'ವಿಧಾನ ಸೌಧ' ಎಂದ ಕೂಡಲೆ 'ಸರಕಾರ' ನೆನಪಾಗುತ್ತದೆ. ಸರಕಾರದ ಅನೇಕ 'ಇಲಾಖೆ'ಗಳು ರಾಜ್ಯದಾದ್ಯಂತ ಬೀಡು ಬಿಟ್ಟಿರುತ್ತವೆ. ಈ ಇಲಾಖೆಗಳು ಸರಕಾರದ ಪರವಾಗಿ ತಮ್ಮ ಕರ್ತವ್ಯ ನಿರ್ವಹಿಸಬೇಕಾಗುತ್ತದೆ. ಅಂದರೆ ಕರ್ತವ್ಯಗಳ ಹಿಂದಿರುವ ಆಜ್ಞೆಗಳು ವಿಧಾನ ಸೌಧದಲ್ಲಿ ತೀರ್ಮಾನವಾಗಬೇಕಾಗುತ್ತವೆ. ಸರಕಾರದ ಗಮನಕ್ಕೆ ಬಾರದ ವಿಷಯವಿಲ್ಲ. ಕಣ್ಣಿಗೆ ಬೀಳದ ವಿಷಯವಿಲ್ಲ. ವಾಸ್ತವವಾಗಿ ಚರ್ಚೆಯ ವಿಷಯ ಇದಲ್ಲ. ವಿಧಾನ ಸೌಧದ ಬಲಪಾರ್ಶ್ವದಲ್ಲಿ ಗೋಪಾಲ ಗೌಡ ವೃತ್ತ ಇದೆ. ಈ ವೃತ್ತದಿಂದ ಎಣಿಸಿ ಹನ್ನೆರಡು ಹೆಜ್ಜೆ ಹಾಕಿದರೆ ಕರ್ನಾಟಕ ಮೀನುಗಾರಿಕೆ ಇಲಾಖೆಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಉದ್ಯೋಗಿಗಳ ಕ್ಷೇಮಾಭಿವೃದ್ಧಿ ಸಂಘದ ಅಧ್ಯಕ್ಷರಾದ ಶ್ರೀ ಗೋಪಾಲ್ ರವರು ತಮಗಾದ ಅನ್ಯಾಯಕ್ಕಾಗಿ ಸುಮಾರು ಐದು ತಿಂಗಳಿಂದ ಸತ್ಯಾಗ್ರಹ ನಡೆಸುತ್ತಿದ್ದಾರೆ. ಇವರ ಈ ಪ್ರತಿಭಟನೆಯ ಕೂಗು ಪಕ್ಕದಲ್ಲಿಯೇ ಇರುವ ವಿಧಾನ ಸೌಧಕ್ಕೆ ಮುಟ್ಟಲಿಲ್ಲವಲ್ಲ ಎಂಬುವುದೇ ಇಲ್ಲಿಯ ಚರ್ಚೆಯ ವಿಷಯ ಮತ್ತು ದುರಂತದ ವಿಷಯ.

ಗೋಪಾಲ್ ಬೆಂಗಳೂರು ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನವರು. ಅವರು ತಮ್ಮ ಕಾಲೇಜ್ ದಿನಗಳಲ್ಲಿ 'ವಿದ್ಯಾರ್ಥಿಗಳ ಪ್ರತಿನಿಧಿ'ಗಳಾಗಿದ್ದರು. ವಿದ್ಯಾಭ್ಯಾಸಮುಗಿದು ನೌಕರಿಗೆಂದು ಮೀನುಗಾರಿಕೆ ಇಲಾಖೆಯಲ್ಲಿ ಸೇರಿಕೊಂಡಾಗ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದ ಉದ್ಯೋಗಿಗಳ ಕ್ಷೇಮಾಭಿವೃದ್ಧಿ ಸಂಘವನ್ನು ಇಲಾಖೆಯ [illegible]ವಾಗಿ [illegible]ಟ್ಟುಹಾಕಿದರು. ಇದೇ ಇವರು ಮಾಡಿದ ಮೊದಲ ಅಪರಾಧ! ಈ ಸಂಘ ಇಲಾಖೆಯಲ್ಲಿನ ಪಟ್ಟಭದ್ರರ ವಿರುದ್ಧ ನಡೆಸಿದ ಹೋರಾಟಗಳೆಲ್ಲ ಇವರ ಬದುಕಿನ ದುರಂತಕ್ಕೆ ಕಾರಣವಾಗ ತೊಡಗಿತು.

ಗೋಪಾಲ್ ರವರು ಕರ್ನಾಟಕ ಸರಕಾರದ ಮೀನುಗಾರಿಕೆಇಲಾಖೆಯಲ್ಲಿ ಸುಮಾರು 15 ವರ್ಷಗಳಿಗೂಹೆಚ್ಚು ಕಾಲಸೇವೆ ಸಲ್ಲಿಸಿದ್ದಾರೆ. ಈ ಮೀನುಗಾರಿಕೆ ಇಲಾಖೆಯ ಪ್ರವೇಶ ಮತ್ತು ನಿರ್ಗಮನಗಳನ್ನು ಅನುಭವದಿಂದ ಅರಿತು ಕೊಂಡಿದ್ದರು. ಇಲ್ಲಿ ಹಿಂದುಳಿದ ವರ್ಗದ ಜನರ ನೋವುಗಳನ್ನು ಕಂಡಿದ್ದರು. ಇಲ್ಲಿಯೇ ಮೀನುಗಳೊಂದಿಗೆ ಮೀನುಗಳಂತೆ ವರ್ತಿಸುತ್ತಿದ್ದ ತಿಮಿಂಗಿಲಗಳನ್ನು ಗುರ್ತಿಸುತ್ತಿದ್ದರು. ಎಂದೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಉದ್ಯೋಗಿಗಳ ಕಲ್ಯಾಣ ಸಂಘ (ರಿ. ನಂ. ಎಸ್. 170–79–80) ಹುಟ್ಟು ಹಾಕಿದರು. ಪ್ರತಿಭಟನೆಗೆ ವ್ಯವಸ್ಥೆ ಮಾಡಿದರು. ಇದು ಇಲಾಖೆಯ ಗಮನಕ್ಕೆ ಬಂತು. ಅಧಿಕಾರಿಗಳ ಕಣ್ಣಿಗೆ ಬಿದ್ದರು. ಅನಂತರ ಸಸ್ಪೆಂಡ್ ಆದರು. ಒಂದು ದಿನ ಡಿಸ್‌ಮಿಸ್ ಆದರು. ಇದು ಗೋಪಾಲರ ಕಥೆ. ಅಲ್ಲ, ಅವರ ಬದುಕಿನ ಕಥೆ.

ಗೋಪಾಲ್ ಅವರು ತಮಗೆ ಆದ ಅನ್ಯಾಯಕ್ಕಾಗಿ ತಾ॥ 28–1–85ರಂದು ಕೆಲ ಬೇಡಿಕೆಗಳನ್ನು ಮುಂದಿಟ್ಟುಕೊಂಡು ವಿಧಾನ ಸೌಧದ ಎದುರು ಅನಿರ್ದಿಷ್ಟ ಕಾಲ ಸತ್ಯಾಗ್ರಹ ಪ್ರಾರಂಭಿಸಿದರು. ಅವರ [illegible] ಸತ್ಯಾಗ್ರಹದ ಹೋರಾಟ ಕಳೆದ ಮೇ ತಿಂಗಳ 19[illegible]5ಕ್ಕೇ 101ನೇ ದಿನಕ್ಕೆ ಕಾಲಿಟ್ಟಿತು. ರಾಜ್ಯಾದ್ಯಾದಂತ ಯಾವುದೇ ಮೂಲೆಯಲ್ಲಿ [illegible] ಆದರೂ ಏನೇ ಸಂಭವಿಸಿದರೂ ಕೇವಲ ಕೆಲವೇ ತಾಸುಗಳಲ್ಲಿ ವಿಧಾನ ಸೌಧದ ಕಿವಿಗೆ ಮುಟ್ಟುತ್ತದೆ. ಕೂಡಲೇ ಸಂಬಂಧಪಟ್ಟ ಇಲಾಖೆಯಿಂದ ಕೈಗೊಂಡ ಕ್ರಮ, ಪರಿಹಾರ, ತನಿಖಾ ಕ್ರಮ ಇತ್ಯಾದಿಯ ಹೇಳಿಕೆಗಳು ಬಿಡುಗಡೆಯಾಗುತ್ತಿರುತ್ತವೆ. ಆದರೆ ವಿಧಾನ ಸೌಧಕ್ಕೆ ಹನ್ನೆರಡು ಹೆಜ್ಜೆ ದೂರದಲ್ಲಿ ಹೋರಾಟ ನಡೆಸುತ್ತಿರುವ ಗೋಪಾಲ್‌ರಈ ಪ್ರಕರಣ ಏಕೆ ಇನ್ನೂ ವಿಧಾನ ಸೌಧದ ಗಮನಕ್ಕೆ ಬರಲಿಲ್ಲವೆಂಬುವುದೇ ಇಲ್ಲಿಯ ಪ್ರಶ್ನೆ. ನಮ್ಮ ವ್ಯವಸ್ಥೆಯ ಮಂದಗತಿಗೆ ಅವರ ಈ ಪ್ರಕರಣ ಒಂದು ಸಾಕ್ಷಿ.

ಗೋಪಾಲ್ ಅವರು ಪತ್ರಿಕೆಗೆ ಬಿಡುಗಡೆ ಮಾಡಿದ ಹೇಳಿಕೆ ನನ್ನ ಮುಂದಿದೆ. ಆ ಹೇಳಿಕೆಯ ಒಂದು ಭಾಗ ಈ ರೀತಿ ಇದೆ.

"ನಾನು ದಿನಾಂಕ 1–5–81 ರಿಂದ ಅನಧಿಕೃತವಾಗಿ ಕೆಲಸಕ್ಕೆ ಗೈರುಹಾಜರಿ ಆಗಿದ್ದೇನೆಂದು ಮೀನುಗಾರಿಕೆ ನಿರ್ದೇಶಕರು ಹೇಳಿದ್ದಾರೆ. ಇದು ಶುದ್ಧ ಸುಳ್ಳು ಹಾಗು ಆಧಾರ ರಹಿತ. ನಾನು ಕೆಲಸದ ಮೇಲೆ ಹಾಜರಾಗಲು ಎಷ್ಟೇ ವಿಧವಾಗಿ ಕೇಳಿಕೊಂಡರೂ ಹಿಂದಿನ ಮೀನುಗಾರಿಕೆ ನಿರ್ದೇಶಕರು ಅವಕಾಶ ಕೊಡಲಿಲ್ಲ. ನಾನು ಕಚೇರಿಗೆ ಬಾರದಂತೆ ತಡೆಯಲು ನನ್ನನ್ನು ಮತ್ತು ಸಂಘದ ಇಬ್ಬರು ಪದಾಧಿಕಾರಿಗಳ ಮೇಲೆ ದಿನಾಂಕ 2–5–81ರಂದು ತನ್ನ ನಾಲ್ಕು ಮಂದಿ 'ಚಮಚ' ನೌಕರನ್ನೇ ಡಿ)

(23ನೇ ಪು

# ಎನ್‌ಗುಗಿವ: ಕಪ್ಪು ಸಾಹಿತ್ಯದ ಹೊಸ ಬೆಳಕು

ನನ್ನ ಕೊಠಡಿಯ ಮೇಲೆಯೇ ಮೊದಲದಾಳಿ ನಡೆದಿತ್ತು. ಆದರೆ ಅವರು ಅದೇನನ್ನು ಹುಡುಕುತ್ತಿದ್ದಾರೆ ಎಂಬುದು ಮಾತ್ರ ತಿಳಿಯುವಂತಿರಲಿಲ್ಲ. ಅಷ್ಟರಲ್ಲಿ ಶೌಚ ಕಾಗದಗಳ ಗುಡ್ಡೆಯೊಂದು ಅಲ್ಲಿ ಬಿದ್ದಿರುವುದನ್ನು ಕಂಡ ಸಾರ್ಜೆಂಟ್‌ನೊಬ್ಬ ತಕ್ಷಣ ಅದನ್ನೆತ್ತಿಕೊಂಡ. ನಂತರ ಸಂತೋಷ ಮತ್ತು ವಿಜಯೋನ್ಮತ್ತತೆಯಿಂದ ಆರಕ್ಷಕದಳದ ಮುಖ್ಯಸ್ಥನೆಡೆ ತಿರುಗಿ ಉದ್ರಿಕ್ತದನಿಯಲ್ಲಿ "ಇಲ್ಲಿದೆ....... ಪುಸ್ತಕ ಇಲ್ಲಿದೆ....ಸಾರ್....ಶೌಚಕಾಗದಗಳ ಮೇಲೆ.... !" ಎಂದು ಕೂಗಿದನು. ಆ ಮುಖ್ಯಸ್ಥ ಒಡನೆ "ಅದನ್ನೆಲ್ಲ ಎತ್ತಿಟ್ಟುಕೋ" ಎಂದು ಆಜ್ಞಾಪಿಸಿದ. ಅದನ್ನು ನೋಡಿದ ನಂತರ ನನ್ನೆಡೆ ತಿರುಗಿದ ಆತ "ಓಹೋ....ಅಷ್ಟೊಂದು. ಅಬ್ಬಾಬ್ಬಾ! ಸೆರೆಮನೆಯೊಳಗೆ ಪುಸ್ತಕಗಳನ್ನು ಬರೆಯಲು ನಿನಗೆ ಯಾರು ಹೇಳಿದ್ದು ?" ಎಂದು ಗದರಿಸಿದನು.

ಮೂರು ವಾರಗಳ ನಂತರ ಜೈಲಾಧಿಕಾರಿ ನನ್ನ ಆ ಹಸ್ತಪ್ರತಿಗಳನ್ನೆಲ್ಲಾ ಹಿಂತಿರುಗಿಸಿ "ನನಗೆ ತಿಳಿವಮಟ್ಟಿಗೆ ಇದರಲ್ಲೇನೂ ತಪ್ಪು ಕಾಣಲಿಲ್ಲ" ಎಂದನು. "ನಿಮಗೆ....ವಂದನೆಗಳು !" ಎಂದು ನಾನು ಉದ್ಗರಿಸಿದೆ. ಆದರೆ ಈ ಸಣ್ಣ ಎರಡು ಪದಗಳ ಹಿಂದಿದ್ದ ಅಪಾರ ಮನೋದ್ವೇಗ, ಭಾವನೆಗಳ ಗಾಢತೆಯನ್ನು ಬಹುಶಃ ಆ ಅಧಿಕಾರಿ ಅರ್ಥ ಮಾಡಿಕೊಂಡಿರಲಿಕ್ಕಿಲ್ಲ !

"ಎ ರೈಟರ್ಸ್ ಪ್ರಿಸನ್ ಡೈರಿ"ಯಿಂದ.

* * *

ಎನ್‌ಗುಗಿವ ಥಿಯೋಂಗೊರನ್ನು ವಿನಾಕಾರಣ 1977ರ ಡಿಸೆಂಬರ್ 31 ರಿಂದ 1978ರ ಡಿಸೆಂಬರ್ 12ರವರೆಗೆ ಕೆನ್ಯಾದ ಸೆರೆಮನೆಯೊಂದರಲ್ಲಿ ಬಂಧಿಸಿಡಲಾಗಿತ್ತು. "ಎ ರೈಟರ್ಸ್ ಪ್ರಿಸನ್ ಡೈರಿ" ಎನ್‌ಗುಗಿಯವರ ಐದನೆಯ ಕಾದಂಬರಿಯಾಗಿದೆ. ಅವರು "ಕಿಕಯು" ಭಾಷೆಯಲ್ಲಿ ಬರೆದ ಪ್ರಥಮ ಪುಸ್ತಕ ಕೂಡ ಇದಾಗಿದೆ. ಈ ಕಾದಂಬರಿಯನ್ನು ಎನ್‌ಗುಗಿಯವರು ಇಂಗ್ಲಿಷ್ ಭಾಷೆಗೆ ಸಹ ಭಾಷಾಂತರಿಸಿದರು. ಅದರ ಹೆಸರು "ಡೆವಿಲ್ ಆನ್ ದಿ ಕ್ರಾಸ್" (ಶಿಲುಬೆಯ ಮೇಲೆ ಭೂತ). 1982ರ ಮಧ್ಯಾವಧಿಯಲ್ಲಿ ಅವರು ಈ ಇಂಗ್ಲಿಷ್ ಭಾಷಾಂತರವನ್ನು ಹೊರತರಲಿಕ್ಕಾಗಿಯೇ ಲಂಡನ್‌ಗೆ ಹೋದರು. ನಂತರ ಅಲ್ಲಿಂದಾಚೆಗೆ ಅವರು ಅಲ್ಲಿಯೇ ನೆಲೆಸಿದರು.

ಕೆನ್ಯಾದಲ್ಲಿ ವಾಯುಪಡೆಯವರ ವಿಫಲ ಕ್ಷಿಪ್ರ ಕ್ರಾಂತಿಯ ನಂತರ ಎನ್‌ಗುಗಿ ಸ್ವದೇಶಕ್ಕೆ ತೆರಳಬೇಕೆಂದಿರುವಾಗಲೇ ಅಲ್ಲಿ ದಮನಕಾರಿ ಚಟುವಟಿಕೆಗಳ ಹೊಸಗಾಳಿಯ ಬಗ್ಗೆ ಮತ್ತೆ ಸುದ್ದಿ ಕೇಳಿ ಬರತೊಡಗಿತು. ಮುನ್ಸೂಚನೆ, ಪೂರ್ವ ವಿಚಾರಣೆಗಳಿಲ್ಲದೇ ಜನರನ್ನು ಬಂಧಿಸಲಾಗುತ್ತಿತ್ತು. ಕ್ರಾಂತಿಕಾರಿ ಸಾಹಿತ್ಯ ಪ್ರಕಟಣೆಗಳಿಗೆ ಸಂಬಂಧಿಸಿದಂತೆ ಕೆಲವರನ್ನು ಬಂಧಿಸಲಾಗುತ್ತಿತ್ತು. ಕೆನ್ಯಾದಲ್ಲಿ ಏಕೈಕ ಪಕ್ಷದ ಆಡಳಿತವನ್ನು ಘೋಷಿಸಲಾಗಿತ್ತು. ವಿದ್ಯಾರ್ಥಿಗಳಿಂದ ಬಲವಂತವಾಗಿ "ರಾಜಭಕ್ತಿ"ಯನ್ನು ನಿರೀಕ್ಷಿಸಲಾಗಿತ್ತು. ಸರ್ಕಾರಿ ವಿರೋಧಿ ವಿಚಾರಗಳೇನೂ ಇರದಂತೆ ನೋಡಿಕೊಳ್ಳಲು ಅವರ ಪಠ್ಯಪುಸ್ತಕಗಳನ್ನು ಪೂರ್ಣವಾಗಿ



ಪರಿಶೀಲನೆಗೆ ಒಳಪಡಿಸಲಾಗುತ್ತಿತ್ತು. ನೈರೋಬಿ ವಿಶ್ವವಿದ್ಯಾನಿಲಯದ ಬುದ್ಧಿಜೀವಿಗಳು ತಜ್ಞರು ಪಂಡಿತರುಗಳ ಮೇಲೆಲ್ಲಾ ಕಣ್ಣಿಡಲಾಗಿತ್ತು. ಈ ಸಂದರ್ಭದಲ್ಲಿ ಎನ್‌ಗುಗಿಯವರು ಕೆನ್ಯಾಕ್ಕೆ ಬಂದಿದ್ದರೆ ಬಹುಶಃ ಅವರೂ ಬಂದಿಸಲ್ಪಡುತ್ತಿದ್ದರು.

ಅರವತ್ತರ ದಶಕದಲ್ಲಿ "ಜೇಮ್ಸ್ ಎನ್‌ಗುಗಿ" ಎಂದೇ ಪರಿಚಿತರಾಗಿದ್ದ ಅವರು ಲೀಡ್ಸ್ ವಿಶ್ವವಿದ್ಯಾನಿಲಯದಲ್ಲಿ ತಮ್ಮ ಸ್ನಾತಕೋತ್ತರ ಶಿಕ್ಷಣ ಪಡೆಯಲು ತೆರಳಿದ್ದರು. ಆದಾಗಲೇ ಅವರು "ವೀಪ್ ನಾಟ್ ಚೈಲ್ಡ್" (1964) ಮತ್ತು "ದಿ ರಿವರ್ ಬಿಟ್ವೀನ್" (1968) ಎಂಬ ಎರಡು ಖ್ಯಾತ ಕಾದಂಬರಿಗಳನ್ನು ಪ್ರಕಟಿಸಿದ್ದರು. ಲೀಡ್ಸ್‌ನಲ್ಲಿದ್ದಾಗಲೇ "ಎ ಗ್ರೈನ್ ಆಫ್ ವೀಟ್" ಕೃತಿಯನ್ನು ಪೂರ್ಣಗೊಳಿಸಿ 1967ರಲ್ಲಿ ಅದನ್ನು ಪ್ರಕಟಿಸಿದರು.

ಕೆನ್ಯಾಕ್ಕೆ ವಾಪಾಸಾಗುತ್ತಿದ್ದಂತೆ ಅವರು ತಮ್ಮ ಕ್ರಿಶ್ಚಿಯನ್ ಹೆಸರನ್ನು ತ್ಯಜಿಸಿ ತಮ್ಮ ತವರು "ಕಿಕುಯು"ವಿನ "ಎನ್‌ಗುಗಿ ವ ಥಿಯೋಂಗೊ" (ಥಿಯೋಂಗೊ ಅವರ ತಂದೆಯ ಹೆಸರು) ಎಂಬ ಸಾಂಪ್ರದಾಯಕ ಹೆಸರನ್ನಿಟ್ಟುಕೊಂಡರು. ನಂತರ ಅವರು ನೈರೋಬಿಯ ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸಕರಾಗಿ ಕೆಲಸಕ್ಕೆ ಸೇರಿದರು. ಕೊನೆಯಲ್ಲಿ ಅವರು ಆ ವಿಶ್ವವಿದ್ಯಾನಿಲಯದ ಸಾಹಿತ್ಯ ವಿಭಾಗದ ಮುಖ್ಯಸ್ಥರಾದರು. ಅಲ್ಲಿ ಅವರು ಸಾಹಿತ್ಯ ಮತ್ತು ಸಾಂಸ್ಕೃತಿಕ ಅಧ್ಯಯನಗಳಲ್ಲಿ ಆಫ್ರಿಕನ್ ಮೌಲ್ಯಗಳನ್ನು ತುಂಬುತ್ತಾ ಆ ಅಧ್ಯಯನಗಳನ್ನು ಆಫ್ರಿಕೀಕರಣಗೊಳಿಸುವ ನಿಟ್ಟಿನಲ್ಲಿ ಬಹಳಷ್ಟು ಕೆಲಸ ಮಾಡಿದರು.

1977, ಅವರ ಬದುಕಿನ ಒಂದು ಪ್ರಮುಖ ಘಟ್ಟ ಎನ್ನಬಹುದೇನೋ. ಅವರ ಅತ್ಯುತ್ತಮ ಕಾದಂಬರಿಯಾದ "ಪೆಟಲ್ಸ್ ಆಫ್ ಬ್ಲಡ್" ತೀಕ್ಷ್ಣ ವಿಮರ್ಶೆಗಳ ಗದ್ದಲಗಳೊಡನೆ ಅದೇ ವರ್ಷ ಬಿಡುಗಡೆಗೊಂಡಿತು. ಕೆನ್ಯಾದ ಮೇಲ್ವರ್ಗದವರಿಂದೊಡಗೂಡಿದ ಅಸಂಖ್ಯ ಓದುಗ, ವಿಮರ್ಶಕರ ಹರಿತವಾದ ವಿಮರ್ಶೆಗಳಿಗೊಳಗಾಗುತ್ತಿದ್ದಾಗಲೇ ಆ ಕಾದಂಬರಿಯು ಅಂದಿನ ಪ್ರಭಾವಿ ಹಣಕಾಸು ಸಚಿವ ಮ್ವಾಯರ್ ಕಿಬಕಿ ಅವರಿಂದ ಬಿಡುಗಡೆ ಮಾಡಲ್ಪಟ್ಟಿತು.

ಅನಂತರ ಎನ್‌ಗುಗಿ ಮತ್ತು ಅವರ ಸಹೋದರ ಸಂಬಂಧಿ ಎನ್‌ಗುಗಿ ವಾ'ಮಿರಿ ಇವರಿಬ್ಬರೂ ಸೇರಿ "ನ್ಗಾಹಿಕ ನ್ದೇಂಡ" (ನಾನು ಬಯಸಿದಾಗ ನಾನು ಮದುವೆಯಾಗುತ್ತೇನೆ) ಎಂಬ ನಾಟಕವನ್ನು ಕಿಕುಯು ಭಾಷೆಯಲ್ಲಿ ಬರೆದರು. ಎನ್‌ಗುಗಿ ಅವರು ವಾಸಿಸುತ್ತಿದ್ದ ಪ್ರದೇಶವಲ್ಲೇ ಇದ್ದ ಕಮಿರಿತು ಕಮ್ಯುನಿಟಿ ಸೆಂಟರ್‌ನಲ್ಲಿ ಈ ನಾಟಕವನ್ನು ತಿಂಗಳಾನುಗಟ್ಟಲೆ ತುಂಬಿದ ಗೃಹಗಳಲ್ಲಿ ಪ್ರದರ್ಶಿಸಲಾಯಿತು. ಅಲ್ಲಿನ ನಾಟಕ ಮಂದಿರವನ್ನು ಆ ಪ್ರದೇಶದ ರೈತರು ಮತ್ತು ಕಾರ್ಮಿಕರೇ ನಿರ್ಮಿಸಿದ್ದರೆನ್ನುವುದೊಂದು ವಿಶೇಷ. ಅವರೆಲ್ಲಾ ಈ ನಾಟಕದ ಬಗ್ಗೆ ಅತ್ಯುತ್ತಮ ರಚನಾತ್ಮಕ ವಿಮರ್ಶೆ ಮಾಡಿದ್ದರು. ಭಾಷೆಯ ಬಳಕೆ, ಪಾತ್ರ ವರ್ಗಗಳ ಗುಣ ವಿಶ್ಲೇಷಣೆ ಮುಂತಾದುವುಗಳಲ್ಲಿ ಭಾರಿ ಸುಧಾರಣೆ ಮಾಡಲಾಗಿತ್ತು. ಬಡ ರೈತನೊಬ್ಬನಿಗೆ ಸೇರಿದ ನೆಲ ಹೇಗೆ ಮೇಲ್ಮಟ್ಟದ ಪ್ರಭಾವಿಗಳ ಕೈಚಳಕದಿಂದ ಶ್ರೀಮಂತರ ಕೈ ಸೇರುತ್ತೆ ಎಂಬುದನ್ನು ಇಲ್ಲಿ ಪ್ರಧಾನವಾಗಿ ಎತ್ತಿತೋರಿಸಲಾಗಿತ್ತು.

ಡಿಸೆಂಬರ್‌ನಲ್ಲಿ ಈ ನಾಟಕ ಪ್ರದರ್ಶನವನ್ನು ...ಷೇಧಿಸಲಾಯಿತು. ನಂತರ ಕೆಲವೇ ಸಮಯ ...ಲ್ಲಿ ಎನ್‌ಗುಗಿಯವರನ್ನೂ ಬಂಧಿಸಲಾಯಿತು. ...ಂದು ಗೃಹಸಚಿವರಾಗಿದ್ದ ಡೇನಿಯಲ್ ಟಿ ಅರಪ್ ...ೋಯ್‌ಯವರು ಎನ್‌ಗುಗಿಯವರ ಬಂಧನದ ...ಜ್ಞಾಪತ್ರಕ್ಕೆ ಸಹಿ ಮಾಡಿದ್ದರು. ಅವರೇ ಇಂದು ...ನ್ಯಾದಲ್ಲಿ ಆಡಳಿತದಲ್ಲಿರುವ ಸರ್ಕಾರದ ಮುಖ್ಯಸ್ಥ ...ಾಗಿದ್ದಾರೆ.

ಇದಕ್ಕೆ ಮೊದಲು ಎನ್‌ಗುಗಿಯವರ ಮೇಲೆ ...ೂವುದೇ ಆಪಾದನೆಗಳನ್ನೂ ಹೊರಿಸಲಾಗಿರಲಿಲ್ಲ. ...ನ್‌ಗುಗಿಯವರೂ ಸೇರಿದಂತೆ ಕೆನ್ಯಾದಲ್ಲಿರುವ ...ಲ್ಲಾ ರಾಜಕೀಯ ಖೈದಿಗಳಿಗೂ ಕ್ಷಮಾಪಣೆ ...ೀಡಿ ಬಿಡುಗಡೆ ಮಾಡಬೇಕೆಂದು ಕೋರಿ 1978ರ ...ಸೆಂಬರ್‌ನಲ್ಲಿ ಕೆನ್ಯಾದ ಸ್ವಾತಂತ್ರ್ಯೋತ್ಸವದ ...5ನೆ ವಾರ್ಷಿಕೋತ್ಸವವೆಂದು ಅಂತರರಾಷ್ಟ್ರೀಯ ...ಂಘಟನೆಗಳನೇಕ ಕೋರಿ ಕೊಂಡಿದ್ದವು.

1980 ಏಪ್ರಿಲ್‌ನಲ್ಲಿ "ಐ ವಿಲ್ ಮ್ಯಾರಿ ...ನ್ ಐ ವಾಂಟ್" ಎಂಬ ನಾಟಕಮತ್ತು "ಡೆವಿಲ್ ...ನ್ ದಿ ಕ್ರಾಸ್" ಎಂಬ ಕಾದಂಬರಿಗಳು ಕಿಕುಯು ...ಲ್ಲಿ ಪ್ರಕಟಗೊಂಡವು. ಈ ಎರಡು ಕೃತಿಗಳೂ ...ಲವೇ ತಿಂಗಳಲ್ಲಿ ಮೂರು ಮುದ್ರಣಗಳನ್ನು ...ಂಡು ಒಟ್ಟು ಐದು ಸಾವಿರಕ್ಕೂ ಹೆಚ್ಚು ಕೃತಿಗಳು ...ಡುಗಡೆಗೊಂಡವು. ತಮ್ಮ ಭಾಷೆಯಲ್ಲಿ ತಮ್ಮದೇ ...ದ ಬದುಕನ್ನು ಕುರಿತ ಇಂತಹ ಒಂದು ಸಮಗ್ರ ...ತಿ ಹೊರಬರಬಹುದೆಂದು ಅಲ್ಲಿಯ ಬಡರೈತರೂ ...ರ್ಮಿಕರು ಕಲ್ಪಿಸಿಕೊಂಡಿರಲೂ ಇಲ್ಲ.

ಅತ್ಯಂತ ಕೆಳದರ್ಜೆನಾಟಕ ಅಥವಾ ಕಾದಂಬ ...ಳೆ ಕೆನ್ಯಾದ ರೆಸ್ಟೋರೆಂಟ್‌ಗಳಲ್ಲಿ ಪಾನ ...ೀಷ್ಠಿಗಳಲ್ಲಿ ಆಗಾಗ್ಗೆ ಚರ್ಚೆಗೆ ಬರುತ್ತಿದ್ದವಾ ...ೂ ಅವುಗಳು ಮತೀಯ ಅಥವಾ ಜಾತೀಯ ...ರ್ಜೆಗಳಾಗಿ ಅಂತಿಮದಲ್ಲಿ ಪರ್ಯಾವಸಾನ ...ಳ್ಳುತ್ತಿದ್ದವು.

ಕೆನ್ಯಾದವನೂ ಏಕೆ ಪುಸ್ತಕಗಳನ್ನು ಪ್ರಕಟಿಸ ...ರದು ? ಡೈನ್‌ಮನ್ ಇತ್ಯಾದಿ ಯುರೋಪಿ ...ನ್ನರೇ ಏಕೆ ಪುಸ್ತಕಗಳನ್ನು ಪ್ರಕಟಿಸಬೇಕು ? ...ದ ಲಿಟರೇಚರ್ ಬ್ಯೂರೋಕ್ಕೆ ಪುಸ್ತಕಗಳ ... ಮೊದಲು ಅಭಿಪ್ರಾಯ, ಒಪ್ಪಿಗೆಗಳನ್ನು ...ಡುವುದಕ್ಕೆ ಹಕ್ಕು ಇದೆ. ಆದರೆ ಅದನ್ನು ಪ್ರಕ ...ಲು ಮಾತ್ರ ಇಲ್ಲವೇಕೆ ? ಎಂದೆಲ್ಲಾ ಎನ್ ...ಯುವರು ಪ್ರಶ್ನಿಸತೊಡಗಿದರು.

ತಮ್ಮ ಬರಹಗಳಿಂದ ಬರುವ ಆದಾಯ ...ಲೇ ಜೀವನ ಸಾಗಿಸುತ್ತಿದ್ದ ಎನ್‌ಗುಗಿಯ ...ು ಆಫ್ರಿಕಾದಲ್ಲೇ ಒಂದು ವಿಶಿಷ್ಟವಾದ ವ್ಯಕ್ತಿತ್ವ. ಕೆನ್ಯಾದ ಜನರ 1963ರ ಸ್ವಾತಂತ್ರ್ಯ ಮತ್ತು ಸ್ವಾತಂತ್ರ್ಯ ಪೂರ್ವ ಬದುಕುಗಳ ಬಗ್ಗೆ ಒಂದು ಐತಿಹಾಸಿಕ ದಾಖಲೆಯಂತಿದೆ ಎನ್‌ಗುಗಿಯವರ ಸಾಹಿತ್ಯ ಎಂದರೆ ಅತಿಶಯೋಕ್ತಿ ಎನಿಸದು. ಅವರ ಇತ್ತೀಚಿಗಿನ ಪುಸ್ತಕವಾದ "ಡೆವಿಲ್ ಆನ್ ದಿ ಕ್ರಾಸ್" ಎನ್ನುವುದು ಜಸಿಂತಾವಾರಿಂಗ್ ಎನ್ನುವ ಹೆಣ್ಣೊಬ್ಬಳ ನೋವಿನ ಅನುಭವಗಳ ಸಂಗ್ರಹ, ಸರಮಾಲೆಯೇ ಆಗಿದೆ.

ಅವಳು ಶಾಲಾ ಬಾಲಕಿಯಾಗಿದ್ದಾಗಲೇ ಶ್ರೀಮಂತ ಮುದುಕನೊಬ್ಬ ಅವಳನ್ನು ಇಟ್ಟುಕೊಳ್ಳುತ್ತಾನೆ. ಅವಳು ಬಸುರಿಯಾದಾಗ ಸಮಾಜದ ಕಣ್ಣಿನಲ್ಲಿ ಜಾರಿಣಿಯಾಗುತ್ತಾಳೆ. ನಂತರ ತನ್ನ ಮಗುವನ್ನು ಅವಳ ತಂದೆ ತಾಯಿಯರಲ್ಲಿ ಬಿಟ್ಟು ನೈರೋಬಿಯಾದಲ್ಲಿ ಸಿಕ್ಕಿದ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ. ಅಲ್ಲಿ ಅವಳ ಮೇಲಾಧಿಕಾರಿ ಅವಳೊಡನೆ ಲೈಂಗಿಕ ಸಂಬಂಧ ಬೆಳೆಸುವ ಆಸೆಯನ್ನು ವ್ಯಕ್ತಪಡಿಸುತ್ತಾನೆ. ಆದರೆ ಅವಳು ಅವನ ಬೇಡಿಕೆಯನ್ನು ತಿರಸ್ಕರಿಸುತ್ತಾಳೆ. ಅವಳು ತನ್ನ ಬಾಲ್ಯದ ಗೆಳೆಯನೊಡನಿರುವ ಮಧುರ ಸಂಬಂಧವನ್ನು ಸದಾ ನೆನೆಸಿಕೊಳ್ಳುತ್ತಿರುತ್ತಾಳೆ. ಆದರೆ ಒಂದು ದಿನ ಅವಳು ಶೀಲಗೆಟ್ಟವಳೆಂದೂ ಸ್ವೇಚ್ಛಾಚಾರಿ ಇತ್ಯಾದಿ ಕಾರಣಗಳನ್ನು ಮುಂದೊಡ್ಡಿ ಆ ಬಾಲ್ಯದ ಗೆಳೆಯನೂ ಇವಳಿಂದ ದೂರ ಸರಿಯುತ್ತಾನೆ. ಮತ್ತೊಂದು ದಿನ ಅವಳು ತನ್ನ ಕೆಲಸದಿಂದಲೂ ಉಚ್ಚಾಟಿಸಲ್ಪಡುತ್ತಾಳೆ. ಇದರೊಡನೆ ತಾನಿದ್ದ ಬಾಡಿಗೆ ಮನೆಯಿಂದಲೂ ಹೊರಹಾಕಲ್ಪಡುತ್ತಾಳೆ. ಅವಳ ಬದುಕು ನುಚ್ಚುನೂರಾಗುತ್ತದೆ.

ಅಲ್ಲಿಂದ ಅವಳು ಇಲ್‌ಮೊರೊಂಗ್‌ನಲ್ಲಿರುವ ತನ್ನ ತಂದೆತಾಯಿ ಮತ್ತು ಮಗುವನ್ನು ನೋಡಲು ಹೊರಡುತ್ತಾಳೆ. ಅವಳ ಊರಾದ ಇಲ್‌ಮೊರೊಂಗ್ ನಗರೀಕರಣದತ್ತ ಸಾಗುತ್ತಿರುವ ಒಂದು ಪುಟ್ಟ ಗ್ರಾಮ ಆ ಊರಿನ ಹಾದಿಯಲ್ಲಿ ಅವಳು "ಎ ಡೆವಿಲ್ಸ್ ಫೀಸ್ಟ್ ಆಫ್ ಥೀವ್ಸ್ ಮತ್ತು ರಾಬ್ಬರ್ಸ್" ಎಂಬ ನಾಟಕಕ್ಕೆ ಆಹ್ವಾನಿಸಲ್ಪಡುತ್ತಾಳೆ.

ಸ್ಥಳೀಯ ವ್ಯಾಪಾರಿ ಮತ್ತು ರಾಜಕಾರಿಣಿಗಳ ಚಟುವಟಿಕೆಗಳ ಮೇಲೆಯೇ ಕಾದಂಬರಿಯ ಬಹುಭಾಗವನ್ನು ವಿನಿಯೋಗಿಸಲಾಗಿದೆ. ಅದರಲ್ಲಿ ಶೋಷಣೆ ಮತ್ತು ಭ್ರಷ್ಟಾಚಾರಗಳ ಕಾರ್ಯದಲ್ಲಿ ಪರಮಾವಧಿ ಮುಟ್ಟುವವರಿಗೆ ಪ್ರಶಸ್ತಿಕೊಡುವಂತೆಯೂ ಚಿತ್ರಿಸಲಾಗಿದೆ. ಇಂತಹ ಸಮಾಜ ಘಾತುಕರನ್ನು ಬಂಧಿಸಲು ಪೋಲೀಸರನ್ನು ಕರೆತರುವ ಮಹಿಳೆಯೊಬ್ಬಳು ತಾನೇ ಬಂಧನಕ್ಕೊಳಗಾಗುತ್ತಾಳೆ. ಇದೆಲ್ಲಾ ನೋಡುತ್ತಾ ಈ ಕಾದಂಬರಿಯ ಕಥಾನಾಯಕಿ ವಾರಿಂಗ್‌ಗಳು ಮಾನಸಿಕವಾಗಿ ಬಹಳಷ್ಟು ಆಘಾತಗೊಳ್ಳುತ್ತಾಳೆ. ಈ ವ್ಯವಸ್ಥೆಯೊಳಗೆ ಬದುಕಲು ಅನುಭವದಿಂದ ಕಲಿತಪಾಠದಿಂದ ಈಗವಳು ತನ್ನೆಲ್ಲಾ ಶಕ್ತಿಯನ್ನು ಶ್ರಮವನ್ನೂ ವಾಹನಗಳ ರಿಪೇರಿಯಲ್ಲಿ ನೈಪುಣ್ಯತೆ ಪಡೆಯುವುದರ ಬಗ್ಗೆ ಮತ್ತು ಕರಾಟೆ ಕಲಿಯುವ ನಿಟ್ಟಿನಲ್ಲಿ ತೊಡಗಿಸುತ್ತಾಳೆ. ಇದರ ಮೂಲಕ ತನ್ನ ಬದುಕು ವ್ಯಕ್ತಿತ್ವ ಮತ್ತು ತನ್ನ ಜನರ ಸಂಸ್ಕೃತಿಯ ಹಿರಿಮೆಗಳನ್ನು ಪ್ರತಿಪಾದಿಸುವುದನ್ನು ಅವಳು ಇಷ್ಟಪಡುತ್ತಾಳೆ.

ಕೆನ್ಯಾದ ಪ್ರಸ್ತುತ ಬದುಕಿನ ನಾಗಲೋಟದ ಬಗ್ಗೆ "ಡೆವಿಲ್ ಆನ್ ದಿ ಕ್ರಾಸ್"ನಲ್ಲಿ ಅತ್ಯಂತ ಉದ್ರೇಕಪೂರಿತವಾಗಿಯೂ ತೀಕ್ಷ್ಣವಾಗಿಯೂ ಬರೆಯಲಾಗಿದೆ. ಮರ್ಸಿಡಿಸ್-ಬೆಂಜ್‌ಗಳ ಸ್ಥಳೀಯ ಮಾಲೀಕ (!)ರಾದ ವಸಾಹತುಷಾಹಿಗಳ ದಲ್ಲಾಳಿಗಳಾದ ವಾಜಿನ್‌ಜ್ಜಿಗಳು ವಿದೇಶಿ ಬಂಡವಾಳಷಾಹಿಗಳೊಡನೆ ಒಪ್ಪಂದ-ಸಂಬಂಧಗಳನ್ನಿಟ್ಟುಕೊಂಡಿದ್ದಾರೆ. ಇಂತಹವರಲ್ಲೇ ಒಬ್ಬ ದೇಶೀಯ ಬಂಡವಾಳವೇ, ಬೇಕಾಗಿಲ್ಲವೆಂದು ವಾದಿಸುತ್ತಾನೆ. ಇಲ್ಲಿ ಸಮಾಜವಾದದವಾಸ್ತವತೆಯಸಾಹಿತ್ಯವಿಂದು ಉಪದೇಶಗಳ ಸ್ಫೂರ್ತಿಯಾಗಿ ಕಾಣುತ್ತಿದೆ. ಆದರೆ ಎನ್‌ಗುಗಿಯವರ ಬರಹಗಳು ಕಿಕುಯು ಭಾಷೆಯ ಸರಳಬಳಕೆ, ಕಥೆ ಹೇಳುವ ಧಾಟಿ, ಗಾದೆಗಳ ಬಳಕೆ ಒಗಟು ಮತ್ತು ಹಾಡುಗಳಿಂದ ಕೂಡಿದ್ದು ವಿಶಿಷ್ಟವಾಗಿದೆ. ಅವರು ತಮ್ಮ ಕಥೆಗಳಿಗೆ ವಸ್ತುಗಳನ್ನು ತಾವು ಜೈಲಿನಲ್ಲಿದ್ದಾಗ ಅಲ್ಲಿ ತಮ್ಮವರೊಡನಿದ್ದವರಿಂದ ಪಡೆಯುತ್ತಿದ್ದುದಾಗಿದೆ.

ಬರಹಗಾರ ಅವರಲ್ಲೂ ಮುಖ್ಯವಾಗಿ ವಿದೇಶಿ ಭಾಷೆಯಲ್ಲಿ ಸಾಹಿತ್ಯ ಕೃಷಿ ನಡೆಸುವವ ತನ್ನನ್ನು ಗುರುತಿಸಿಕೊಳ್ಳುವ ನಿಟ್ಟಿನಲ್ಲೇ ಹೊಯ್ದಾಡುತ್ತಾನೇನೋ ಎನ್ನುವ ಎನ್ಗುಗಿ "ನಾನು ನನ್ನ ಪ್ರೊಫೆಸರ್‌ಗಿರಿಯ ಕುರ್ಚಿಯಲ್ಲಿ ಕುಳಿತಿದ್ದಾಗಲಿಗಿಂತಾ ಬಂದೀಖಾನೆಯ ತಣ್ಣನೆಯ ಗಾರೆ ನೆಲದ ಮೇಲೆ ಕುಳಿತಾಗ ನನ್ನ ಯೋಚನೆ ಚಿಂತನೆಗಳೆಲ್ಲಾ ಸಂಪೂರ್ಣ ವ್ಯತ್ಯಾಸವಾಗಿರುತ್ತದೆ ಮತ್ತು ವಿಭಿನ್ನರೂಪು ಪಡೆದಿರುತ್ತದೆ" ಎನ್ನುತ್ತಾರೆ.

ಕಿಕುಯು ಭಾಷೆಯಲ್ಲಿನ ಅವರ ಸಾಹಿತ್ಯಕ್ಕೆ ಸಿಕ್ಕಿದ ಜನಪ್ರಿಯತೆಯಿಂದ ಅವರು ಇಂಗ್ಲಿಷ್‌ನಲ್ಲಿ ಬರೆಯುವುದನ್ನೇನೂ ನಿಲ್ಲಿಸಿಲ್ಲ. "ನಾನು ನನ್ನ ಎಲ್ಲಾ ಶ್ರಮವನ್ನು ಪ್ರಸ್ತುತ ಕಿಕುಯು ಭಾಷಾ

(7ನೇ ಪುಟಕ್ಕೆ)

# ಮಹಿಳೆಯರೇ, ನಿಮಗಿದು ತಿಳಿದಿದೆಯೇ ?

ಮಹಿಳೆಯರು ಆದಾಯ ಹೆಚ್ಚಿಸಿಕೊಳ್ಳಲು ಕರ್ನಾಟಕ ಸರ್ಕಾರ ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡಿದೆ.

* ನೀವು ಆರಂಭಿಸುವ ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆ, ಗ್ರಾಮೀಣ ಕೈಗಾರಿಕೆ, ಕೈಮಗ್ಗ ಕರಕುಶಲ ವಸ್ತುಗಳ ತಯಾರಿಕಾ ಘಟಕಗಳಿಗೆ ರಾಜ್ಯ ಸರ್ಕಾರ ಉತ್ತೇಜನ ನೀಡಲಿದೆ.

* ರಾಷ್ಟ್ರೀಕೃತ ಬ್ಯಾಂಕುಗಳು ಮತ್ತಿತರ ಹಣಕಾಸು ಸಂಸ್ಥೆಗಳಿಂದ ಶೇಕಡ 4ರ ಬಡ್ಡಿ ದರದಲ್ಲಿ ಸಾಲ ನೀಡಿಕೆ, ಅಲ್ಲದೆ ಶೇಕಡಾ 25ರಷ್ಟು ಸಹಾಯಧನ ರೂಪದಲ್ಲಿ ಸರ್ಕಾರದಿಂದ ನೆರವು.

* ಮಹಿಳೆಯರು ವೈಯಕ್ತಿಕವಾಗಿ, ಅಥವಾ ಮಹಿಳಾ ಸಹಕಾರ ಸಂಘಗಳು ಮಹಿಳಾ ಮಂಡಲಗಳು ಈ ನೆರವಿಗಾಗಿ ಅರ್ಜಿ ಸಲ್ಲಿಸಬಹುದು.

* ಅರ್ಜಿಗಳನ್ನು ಸಂಬಂಧಿಸಿದ ಮುಖ್ಯ ಸೇವಿಕೆ, ಗ್ರಾಮ ಸೇವಿಕೆ, ಮಕ್ಕಳ ಅಭಿವೃದ್ಧಿಯೋಜನಾ ಅಧಿಕಾರಿ, ಸೂಪರ್ ವೈಸರ್ ಇವರಲ್ಲಿ ಯಾರಾದರೂ ಒಬ್ಬರಿಗೆ ಸಲ್ಲಿಸಬೇಕು.

* ಮಹಿಳೆಯರ ವರಮಾನ ವೃದ್ಧಿಸುವ ಚಟುವಟಿಕೆಗಾಗಿ ನೆರವು ಮಂಜೂರು ಮಾಡುವ ಅಧಿಕಾರ ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರಿಗೆ ಇರುತ್ತದೆ.

* ನೀವು ನಗರವಾಸಿಗಳಾದರೆ 4,500 ರೂ; ಗ್ರಾಮವಾಸಿಗಳಾದರೆ 3,500 ರೂ. ಗಳಿಗಿಂತಲೂ ಕಡಿಮೆ ವಾರ್ಷಿಕ ವರಮಾನವಿರುವವರು ಮೇಲ್ಕಂಡ ಸಹಾಯಕ್ಕೆ ಅರ್ಹರು.

* ಈ ಕಾರ್ಯಕ್ರಮದಲ್ಲಿ ನೀವು ಆರಂಭಿಸಬಹುದಾದ ಸುಮಾರು 103 ಬಗೆಯ ಚಿಕ್ಕಪುಟ್ಟ ಕೈಗಾರಿಕೆಗಳಿವೆ.

ವಿವರಗಳಿಗೆ ಗ್ರಾಮಸೇವಿಕೆ, ಮಕ್ಕಳ ಅಭಿವೃದ್ಧಿ ಯೋಜನಾ ಅಧಿಕಾರಿ, ಅಥವಾ ಜಿಲ್ಲಾ ಸಮಾಜ ಕಲ್ಯಾಣ ಇಲಾಖೆಯ ಸಹಾಯ ನಿರ್ದೇಶಕರನ್ನು ಭೇಟಿ ಮಾಡಿ.

ಮಹಿಳೆಯರ ಕಲ್ಯಾಣಕ್ಕಾಗಿ ಹತ್ತಾರು ಯೋಜನೆಗಳು........

ಕರ್ನಾಟಕ ವಾರ್ತೆ

# ಮಾರೀಚ ಮಾಯೆ ಚಿನ್ನದ ಜಿಂಕೆ–೪




ಸೀತೆಯಿಂದ ನಿಂದಿತನಾದ ಲಕ್ಷ್ಮಣನು ಕೋಪಗೊಂಡು, ಅಣ್ಣನ ಮಾತನ್ನತಿಕ್ರಮಿಸಿ, ಸೀತಾದೇವಿಯನ್ನು ಒಬ್ಬಂಟಿಗಳನ್ನಾಗಿ ಬಿಟ್ಟು ಹೋಗಲು ಇಷ್ಟವಿಲ್ಲದಿದ್ದರೂ, ಮಹಾಪ್ರಯಾಸದಿಂದ ರಾಮನಿದ್ದೆಡೆಗೆ ನಡೆದನು.

ಈ ಸಮಯವನ್ನೆ ಕಾಯುತ್ತಿದ್ದ ದಶಗ್ರೀವನು, ಆಶ್ರಮದ ಸಮೀಪಕ್ಕೆ ಬಂದು ಜಾಗ್ರತೆಯಾಗಿ ಸನ್ಯಾಸಿಯ ರೂಪವನ್ನು ಧರಿಸಿ ವೈದೇಹಿಯ ಬಳಿಗೆ ಬಂದನು. ಕಾಷಾಯ ವಸ್ತ್ರಧರಿಸಿ, ಶಿಖಿಯನ್ನು ಬಿಟ್ಟು, ಛತ್ರಿ ಹಿಡಿದು, ಪಾದುಕೆಗಳನ್ನು ಮೆಟ್ಟಿ, ಶುಭಕ್ಕರವಾದ ದಂಡ ಕಮಂಡಲುಗಳನ್ನು ಎಡಭುಜದಲ್ಲಿ ಇಟ್ಟುಕೊಂಡು, ಸೀತೆಯಿದ್ದೆಡೆ ಬಂದನು. ಅತಿಬಲನಾದ ರಾವಣನು, ಚಂದ್ರ ಸೂರ್ಯರಿಲ್ಲದೆ ಇರುವ ಸಂಧ್ಯಾಕಾಲವನ್ನು ಅಂಧಕಾರ ಸಮೀಪಿಸುವಂತೆ, ಅಣ್ಣ ತಮ್ಮಂದಿರಿಬ್ಬರೂ ಇಲ್ಲದ, ಆ ವೈದೇಹಿಯನ್ನು ಸಮೀಪಿಸಿದನು. ಬಳಿಕ,ಚಂದ್ರರಹಿತಳಾದ ರೋಹಿಣಿಯನ್ನು ಅಂಗಾರಕ ಗ್ರಹದಂತೆ, ಕ್ರೂರ ರಾವಣನು ರಾಮಪತ್ನಿಯನ್ನು ನೋಡಿದನು. ಅಭವ್ಯನಾದ ರಾವಣನು ಭವ್ಯರೂಪವನ್ನು ತಳೆದು, ಗಂಡನನ್ನು ಕುರಿತು, ದುಃಖಿಸುತ್ತಿರುವ, ವೈದೇಹಿಯನ್ನು ಕುರಿತು, ಚಿತ್ತಾನಕ್ಷತ್ರವನ್ನು ಶನಿಗ್ರಹದಂತೆ ಸಮೀಪಿಸಿದನು.

ರಾಮಪತ್ನಿಯಾದ ವೈದೇಹಿಯನ್ನು ಕಂಡು ನಿಂತನು. ಮನೋಹರವಾದ ಹಲ್ಲು ತುಟಿಗಳನ್ನುಳ್ಳವಳೂ,ಪೂರ್ಣಚಂದ್ರನಂತಹ ಮುಖವುಳ್ಳವಳೂ ಶೋಕದಿಂದ ಪೀಡಿತಳಾಗಿ ಕಣ್ಣೀರು ಸುರಿಸುತ್ತಿರುವವಳೂ, ಪದ್ಮಗಳಿಗೆ ಸಮಾನವಾದ ಕಣ್ಣುಗಳುಳ್ಳವಳು ಆದ ವೈದೇಹಿ, ಹಳದಿ ಸೀರೆಯನ್ನುಟ್ಟು, ಏಕಾಂಗಿಯಾಗಿ ಪರ್ಣ ಶಾಲೆಯಲ್ಲಿ ಕುಳಿತಿರುವುದನ್ನು ದುಷ್ಟಚೇತನನಾದ, ಆ ನಿಶಾಚರನು ನೋಡಿ ಸಮೀಪಿಸಿದನು.

ಆಕೆಯನ್ನು ನೋಡಿ ಮನ್ಮಥಬಾಧೆಗೆ ಒಳಗಾದ ಆ ರಾವಣನು ವೇದ ಘೋಷವನ್ನು ಹೇಳುತ್ತಾ, ಆ ಜನಶೂನ್ಯ ಸ್ಥಳದಲ್ಲಿ, ಕಮಲಗಳನ್ನು ತೊರೆದ ಲಕ್ಷ್ಮಿಯಂತಿರುವ ಆ ಉತ್ತಮ ಸ್ತ್ರೀಯನ್ನು ಕುರಿತು, ನಮ್ರಮಾತುಗಳನ್ನಾಡಿದನು. ರಾವಣನು ದೇಹಕಾಂತಿಯಿಂದ ವಿಭ್ರಾಜಮಾನಳಾಗಿರುವ ಅವಳನ್ನು ಪ್ರಶಂಶಿಸಿದನು. "ಕಾಂಚನ ವರ್ಣವುಳ್ಳವಳೆ, ಹಳದಿ ಸೀರೆ ಉಟ್ಟಿರುವವಳೆ ಕಮಲದ ಹಾರ ಧರಿಸಿರುವ ಲಕ್ಷ್ಮಿಯಂತಿರುವ ನೀನಾರು ?ಹೇ ಶುಭಾನನೆ, ನೀನು ಭೂದೇವಿಯೊ, ಕೀರ್ತಿದೇವಿಯೊ, ಲಕ್ಷ್ಮಿಯೊ ಅಥವಾ ಅಪ್ಸರೆಯೊ ಹೇ ವರಾರಾಹೇ, ನೀನು ಸ್ವೇಚ್ಛೆಯಾಗಿ ಬಂದಿರುವ ರತಿದೇವಿಯೊ ? ನಿನ್ನ ಸಮವಾದ ಹಲ್ಲುಗಳು ಒಂದಕ್ಕೊಂದು ಹೊಂದಿಕೊಂಡು ಬೆಳ್ಳಗೆ ಸುಂದರವಾದ ತುದಿಗಳುಳ್ಳವಾಗಿವೆ. ನಿನ್ನ ವಿಶಾಲವಾದ ವಿಮಲ ನೇತ್ರಗಳು ಕೊನೆಯಲ್ಲಿ ಕೆಂಪಾಗಿ ಕಪ್ಪು ತಾರಕೆಗಳುಳ್ಳವಾಗಿವೆ; ವಿಶಾಲವಾದ ಜಘನಗಳು ದೊಡ್ಡವಾಗಿವೆ; ತೊಡೆಗಳು ಆನೆಯ ಸೊಂಡಲಿಗೆ ಸಮಾನವಾಗಿವೆ; ಚೆನ್ನಾಗಿ ಬೆಳೆದು ಗುಂಡಾಗಿರುವ, ಒಂದಕ್ಕೊಂದು ಸೇರಿಕೊಂಡಿರುವ. ಭಾರ ಔನ್ನತ್ಯದಿಂದ, ಚಲಿಸುವಂತಿರುವ, ಬಲಿತು ಎತ್ತರವಾದ ತುದಿಗಳುಳ್ಳ, ಕಣ್ಣಿಗೆ ಮನೋಹರವಾಗಿರುವ, ಮೃದುವಾಗಿರುವ (ಸ್ನಿಗ್ಧಾ), ತಾಳೆ ಹಣ್ಣುಗಳಿಗೆ ಸಮಾನವಾದ, ನಿನ್ನ ಸ್ತನಗಳು, (ಪಯೋಧರಾ) ರತ್ನವಿಕಾರವಾದ ಒಡವೆಗಳಿಂದ ಕೂಡಿ ರುಚಿರವಾಗಿವೆ ; ಹೇ ಚಾರುಸ್ಮಿತೇ ! ಚಾರುದತಿ ! ಚಾರುನೇತ್ರೇ ! ವಿಲಾಸಿನೀ ! ಹೇ ಕಾಂತೆ ! ನದೀ ದಡವನ್ನು ನೀರು ಕೊರೆಯುವಂತೆ, ನನ್ನ ಮನಸ್ಸನ್ನು ಕೊರೆಯುತ್ತಿರುವೆ. ನೀನು ಹಿಡಿನಡುವುಳ್ಳವಳು; ಸುಂದರವಾದ ಕೇಶವುಳ್ಳವಳು; ನಿಬಿಡಸ್ತನಗಳುಳ್ಳವಳು. ನಿನ್ನಂತಹ ರೂಪಸಿಯಾದ ನಾರಿಯನ್ನು, ದೇವತಾ, ಗಂಧರ್ವ, ಯಕ್ಷ ಕಿನ್ನರಲ್ಲಿ ಆಗಲಿ, ಮರ್ತ್ಯಲೋಕದ ಸ್ತ್ರೀಯರಲ್ಲಿಯೇ ಆಗಲಿ ನಾನು ನೋಡಿಲ್ಲ. ಲೋಕಗಳಲ್ಲಿ ಅಸದೃಶನಾದ ಚೆಲುವಿನಿಂದ ಕೂಡಿ, ಯೌವನದಿಂದ ಕೂಡಿ ಈ ಅರಣ್ಯದಲ್ಲಿ ನೀನಿರುವುದನ್ನು ನೋಡಿದರೆ, ನನ್ನ ಮನಸ್ಸು ಉನ್ಮಾದಗೊಳ್ಳುತ್ತಿದೆ. ಇಂತಹವಳು ಕಾಡಿನಲ್ಲಿರುವಂತಹವಳಲ್ಲ. ಈ ಅರಣ್ಯವು ಕಾಮರೂಪಿಗಳಾದ ರಾಕ್ಷಸರಿಗೆ ವಾಸಸ್ಥಾನ. ನೀನು ಎತ್ತರವಾದ ಉಪ್ಪರಿಗೆಗಳಲ್ಲಿ ವಾಸ ಮಾಡಲು ಅರ್ಹಳು; ಉದ್ಯಾನಗಳಲ್ಲಿ ಸಂಚರಿಸಲು ಅರ್ಹಳು; ಹೇ ಶೋಭನೆ, ಶ್ರೇಷ್ಠವಾದ ಹೂವಿನ ಹಾರಗಳಗಳನ್ನು ಭೋಜ್ಯಗಳನ್ನು, ಶ್ರೇಷ್ಠವಸ್ತುಗಳನ್ನು ನೀನು ಪಡೆದಿರಬೇಕು. ಹೇ ಕಪ್ಪು ಕಣ್ಣುಗಳುಳ್ಳವಳೇ (ಅ ಸಿ ತೇ ಕ್ಷ ಣೇ) ನೀನು ಉತ್ತಮ ಪತಿ (ಭರ್ತಾರ)ಯನ್ನು ಪಡೆದಿರಬೇಕು. ಹೇ ಸುಂದರವಾದ ಮುಖವುಳ್ಳವಳೆ, (ವರಾನನೇ) ಏಕಾದಶ ರುದ್ರರಲ್ಲಾಗಲಿ, ಸಪ್ತ ಮರುತ್ತರಗಳಲ್ಲಾಗಲಿ, ಅಷ್ಟವಸ್ತುಗಳಲ್ಲಾಗಲಿ, ನೀನು ಯಾರ ಸಂಬಂಧಿಯಾಗಿರುವೆ ? ಹೇ, ಸುಂದರಿ (ವರಾರೋಹೆ) ನೀನು ನನಗೆ ದೇವತೆಯಾಗಿ ತೋರುತ್ತಿದ್ದೀಯೆ. ಈ ಸ್ಥಳ ರಕ್ಕಸರ ವಾಸಭೂಮಿ. ಇಲ್ಲಿಗೆ ಗಂಧರ್ವರು, ದೇವತೆಗಳು, ಕಿನ್ನರರು, ಬರಲಾರರು. ನೀನು ಇಲ್ಲಿಗೆ ಹೇಗೆ ಬಂದೆ ? ಕ್ರೂರಜಂತುಗಳಿಂದ ಕೂಡಿದ ಈ ಅರಣ್ಯದಲ್ಲಿ ಭಯವಾಗುತ್ತಿಲ್ಲವೆ ? ಹೇ ವರಾನನೇ, ಮದಿಸಿದ ಆನೆಗಳಿಂದ ಕೂಡಿದ ಈ ಅರಣ್ಯದಲ್ಲಿ ಒಬ್ಬಳೇ ಹೇಗೆ ಭಯವಿಲ್ಲದೆ ಇರುವೆ ? ಹೇ ಶುಭಕರಳೇ (ಕಲ್ಯಾಣಿ) ನಿನ್ನ ಹೆಸರೇನು ? ಯಾರ ಸಂಬಂಧಿ ? ಎಲ್ಲಿಂದ ಬಂದೆ ? ಯಾವ ನಿಮಿತ್ತದಿಂದ, ದುರಾತ್ಮರಾದ ರಾಕ್ಷಸರಿಂದ ಕೂಡಿದ ಈ ದಂಡಕಾರಣ್ಯದಲ್ಲಿ, ಒಬ್ಬಳೇ ಸಂಚರಿಸುತ್ತಿರುವೆ ?"




ವಿಶ್ಲೇಷಣೆ–೩

ಈ ಪರಿಯಾಗಿ, ದುರಾತ್ಮನಾದ ರಾವಣನಿಂದ ಹೊಗಳಲ್ಪಟ್ಟು,ಬ್ರಾಹ್ಮಣ ವೇಷ (ದ್ವಿಜಾತಿ ವೇಷೇಣ)ದಿಂದ ಕೂಡಿರುವ ರಾವಣನನ್ನು, ವೈದೇಹಿಯು ನೋಡಿದಳು ಮತ್ತು ಅತಿಥಿ ಸತ್ಕಾರ ಮಾಡಿದಳು. ಪೀಠವನ್ನು ಕೊಟ್ಟು, ಪಾದ್ಯದಿಂದ ಸತ್ಕರಿಸಿ, ಪ್ರಸನ್ನವಾದ ನೋಟವುಳ್ಳ (ಸೌಮ್ಯ ದರ್ಶನಂ) ಅವನನ್ನು ಕುರಿತು, ಅನ್ನವು ಸಿದ್ಧವಾಗಿದೆಯೆಂದು ನುಡಿದಳು.

ಮೈಥಿಲಿಯು, ಬ್ರಾಹ್ಮಣ ವೇಷದಲ್ಲಿ ಬಂದಿ

ರುವ, ಸೋರೆ ಬುರುಡೆ ರಕ್ತ ವಸ್ತ್ರ ಧರಿಸಿರುವ, ತನ್ನ ಅಪಹರಣದಲ್ಲಿಯೇ ದೃಷ್ಟಿವುಳ್ಳ (ಅಪಾಯ ದರ್ಶನಂ), ದ್ವೇಷ ಮಾಡಲು ಅನರ್ಹನಾದ ಅವನನ್ನು ಕಂಡು,ಬ್ರಾಹ್ಮಣನಿಗೆ ಹೇಳುವಂತೆ ಭೋಜನ ಮಾಡಲು ಹೇಳಿದಳು. "ಹೇ ಬ್ರಾಹ್ಮಣ, ಇದೊ ದರ್ಭಾಸನ. ಇಚ್ಛಾನುಸಾರವಾಗಿ (ಕಾಮಂ)ಕುಳಿತುಕೊಳ್ಳುವುದಾಗಲಿ; ಇದೊ ಪಾದ್ಯ, ತೆಗೆದುಕೊಳ್ಳುವುದಾಗಲಿ (ಪ್ರತಿಗೃಹ್ಯತಾಂ); ನಿನಗೋಸ್ಕರ, ಸಿದ್ಧವಾದ ಉತ್ತಮವಾದ ವನಜಾತವಾದ ಈ ಪದಾರ್ಥಗಳನ್ನು ಅವ್ಯಗ್ರನಾಗಿ ಭುಜಿಸುವವನಾಗು.

ಈ ರೀತಿ,ಪ್ರಾರ್ಥಿತನಾದ ಅವನು,ಸರ್ವವೂ ಸಿದ್ಧವಾಗಿದೆಯೆಂದು ಮಾತಾಡುತ್ತಿರುವ ಸರ್ವಾಂಗ ಪತ್ನಿಯಾದ ಮೈಥಿಲಿಯನ್ನು ಕಂಡು, ಬಲಾತ್ಕಾರದಿಂದ, ಆಕೆಯನ್ನು ಅಪಹರಿಸುವಲ್ಲಿ ಮನಸ್ಸನ್ನು ತನ್ನ ಸಂಹಾರಕ್ಕಾಗಿಯೇ, ಇರಿಸಿದನು.

ಬಳಿಕ, ಬೇಟೆಗೆ ಹೋದ ಒಳ್ಳೆಯ ಆಕಾರದ (ಸುವೇಷಂ) ತನ್ನ ಗಂಡನನ್ನು, ಲಕ್ಷ್ಮಣನೊಡಗೂಡಿ ಬರಬಹುದೆಂದು ನಿರೀಕ್ಷಿಸಿದಳು, ವೈದೇಹಿ. ಆದರೆ,ಆಕೆಗೆ ಕಂಡದ್ದು,ಶ್ಯಾಮಲವರ್ಣದ ದೀರ್ಘವಾದ ವನವೇ ಹೊರತು, ರಾಮ ಲಕ್ಷ್ಮಣರಲ್ಲ.

ಸೀತೆಯ ಮೋಹಕತೆಯನ್ನು ಬೇರೆಯವರಿಂದ ಮಾತ್ರಕೇಳಿ ತಿಳಿದಿದ್ದ ರಾವಣ, ಕೇಳಿ ಕಲ್ಪಿಸಿಕೊಂಡಿದ್ದಕ್ಕಿಂತ ನೂರು ಮಡಿ ಮನಮೋಹಕಳಾದ ಅವಳನ್ನು ಕಂಡು ಭ್ರಾಂತನಾಗುತ್ತಾನೆ;ಸೀತೆ ವಿಚಿತ್ರ ಕಾಂಚನ ಮೃಗವನ್ನು ಕಂಡು ಭ್ರಾಂತಳಾಗುವಂತೆ ಸೀತೆ–ರಾಮರಿಗೆ ಕಂಡ ಜಿಂಕೆ,ರಾವಣನಿಗೆ ಕಾಣುತ್ತಿರುವ ಸೀತೆ–ಇವುಗಳಿಗಿರುವ ಸಾಮ್ಯ ಆಕಸ್ಮಿಕವಲ್ಲ. ಚಿನ್ನದ ಜಿಂಕೆಯನ್ನು ಕಂಡು, ಸೀತೆ ಭ್ರಮಿತಳಾಗಿ ಅದರ ಅಂಗಾಂಗಗಳ ಚೆಲುವನ್ನು ವರ್ಣಿಸಿದಂತೆ, ರಾವಣ ಸೀತೆಯ ಅಂಗಾಂಗಗಳ ಚೆಲುವನ್ನು ವರ್ಣಿಸುತ್ತಾನೆ, ಭ್ರಮಿತನಾಗಿ. ಇಂದ್ರನ ನಂದನದಲ್ಲಾಗಲಿ, ಕುಬೇರನ ಚೈತ್ರರಥದಲ್ಲಾಗಲಿ, ಅಂಥ ಜಿಂಕೆ ಇಲ್ಲ, ಎಂದು ರಾಮ ಹೇಳಿದಂತೆ ರಾವಣ, ಸೀತೆಯಂತಹ ರೂಪಸಿಯನ್ನು ದೇವ ಗಂಧರ್ವ ಕಿನ್ನರರಲ್ಲಿ ತಾನು ಕಂಡಿಲ್ಲ, ಎನ್ನುತ್ತಾನೆ, ಕಾಂಚನ ವರ್ಣದ ಮೃಗ; ಕಾಂಚನ ವರ್ಣದ ಸೀತೆ. ನಾನಾವರ್ಣ ವಿಚಿತ್ರಾಂಗವುಳ್ಳ ರತ್ನಬಿಂದು ಸಮಾಚಿತವಾಗಿ ಜಿಂಕೆ ಕಂಡು ಬಂದರೆ; ರಾವಣನಿಗೆ ವೈದೇಹಿಯಾದ ಸೀತೆ 'ವಪುಷಾ ವಿಭ್ರಾಜಮಾನ'ಳಾಗಿ ಕಾಣುತ್ತಾಳೆ. ಜಿಂಕೆಗೆ, ಅದು ಬಾಯಿ ತೆರೆದಾಗ ಮೇಘದಿಂದ ಹೊರಬರುತ್ತಿರುವ ಮಿಂಚಿನಂತೆ ಇರುವ ಬೆಂಕಿ ಜ್ವಾಲೆ ಹೊಳೆಯುತ್ತಿರುವಂತಿರುವ ನಾಲಗೆ, ಇಂದ್ರನೀಲ ಮಾಣಿಕ್ಯದ ವಿಕಾರವಾದ ಪಾನ ಪಾತ್ರದಂತಹ ಮುಖ, ಇಂದ್ರನೀಲ ಮಣಿಗಳ ರವೆಯಂತೆ ಅಧರೋಷ್ಠ ಶಂಖ ಮೌಕ್ತಿಕಗಳಿಗೆ ಸದೃಶವಾದ ಹೊಟ್ಟೆ ಇಪ್ಪೆಹೂವಿನಂಥ ಪಾರ್ಶ್ವ ಭಾಗ, ಪದ್ಮಕೇಸರಗಳಿಗೆ ಸಮಾನವಾದ ಕಾಂತಿ, ವೈಡೂರ್ಯದಂಥ ಖುರ, ಸೂಕ್ಷ್ಮ ಜಂಘ ಪ್ರದೇಶ, ಸುಸಂಹತವಾದ ಅಂಗಾಂಗಗಳು, ರಾಜೀವ ಚಿತ್ರ ಪೃಷ್ಠ–ಇತ್ಯಾದಿ. ರಾವಣನು ವರ್ಣಿಸುತ್ತಿರುವ ಸೀತೆಗೆ, ಸಮಾಶ್ರಿಖರಿಣಸ್ನಿಗ್ಧಾ ಪಾಂಡುರಾದಶನಾ, ರಕ್ತಾಂತವಾದ ಕೃಷ್ಣ ತಾರಕೆಗಳುಳ್ಳ ವಿಶಾಲ ವಿಮಲ ನೇತ್ರಗಳು, ವಿಶಾಲವೂ ಪೀನವೂ ಆದ ಜಘನಗಳು, ಕರಿಕರೋಪಮವಾದ ಊರುಗಳು, ವೃತ್ತವಾದ ಚೆನ್ನಾಗಿ ವೃದ್ಧಿ ಹೊಂದಿದ ಸಂಹತವಾದ, ಪೀನೋನ್ನತಮುಖಗಳಿಂದ ಕೂಡಿದ ಕಾಂತವಾದ ಸ್ನಿಗ್ಧವಾದ ತಾಳೆ ಹಣ್ಣುಗಳಿಗೆ ಸಮಾನವಾದ ಶ್ರೇಷ್ಠ ರತ್ನಗಳಿಂದ ವಿಕಾರವಾದ ಒಡವೆಗಳಿಂದ ಕೂಡಿದ ರುಚಿರವಾದ ಪಯೋಧರಗಳು; ಅವನಿಗೆ ಅವಳು ಚಾರುಸ್ಮಿತೇ ! ಚಾರುದತಿ ! ಚಾರುನೇತ್ರೇ ! ವಿಲಾಸಿನಿ ಇತ್ಯಾದಿ

ಮಾರೀಚ ಮಾಯೆಯಿಂದ ಸೀತೆ–ರಾಮರನ್ನು ಪ್ರಲೋಭನಗೊಳಿಸಿದ್ದೇನೆಂದು ತಿಳಿದಿರುವ ರಾವಣ ವಾಸ್ತವವಾಗಿ ದೇವತೆಗಳ ಮಾಯೆಯಿಂದ ತಾನೇ ಪ್ರಲೋಭನಗೊಂಡು ಭ್ರಮಿತನಾಗಿದ್ದಾನೆ. ಇದು ಇಲ್ಲಿ ವ್ಯಕ್ತವಾಗುವ ಮುಖ್ಯ ಧ್ವನ್ಯರ್ಥವಾಗಿದೆ,ವಾಲ್ಮೀಕಿಯ ಕಾವ್ಯೋದ್ದೇಶದ ದೃಷ್ಟಿಯಿಂದ ನೋಡಿದಾಗ,

ಸೀತೆಯನ್ನು ಕುರಿತು ರಾವಣನಾಡುವ ಮಾತುಗಳನ್ನು ನಮ್ರವಾದ ಮಾತನ್ನು ನುಡಿದನು. (ಪ್ರಶ್ರಿತಂ ವಾಕ್ಯಂ ಅಬ್ರವೀತ್) ಶ್ಲಾಘಿಸಿದನು. (ಪ್ರಶಂಸಹ) ಎಂದು ಕವಿ ಹೇಳುತ್ತಾನೆ. ಹೀಗೆ ಹೊಗಳಲ್ಪಟ್ಟ (ಪ್ರಶಸ್ತಾ) ವೈದೇಹಿ, ರಾವಣನನ್ನು ದ್ವಿಜನೆಂದೇ ತಿಳಿದಿದ್ದಾಳೆ; ಹಾಗೆ ಆಕೆ ತಿಳಿದಿದ್ದರೂ, ಇಲ್ಲಿನ ರಾವಣನ ಸೀತೆಯನ್ನು ಕುರಿತ ಕಾಮುಕ ವರ್ಣನೆಯನ್ನು, 'ಪ್ರಶಂಸೆ'. 'ಪ್ರಶಸ್ತಿ' ಎಂದು ಕರೆದಿರುವುದರ ಅರ್ಥವೇನು ? ಈ ಮಾತುಗಳಿಗೆ ಸೀತೆಯ ಪ್ರತಿಕ್ರಿಯೆಯೇನು? ಆಕೆ ಅವುಗಳನ್ನ ತನ್ನ 'ಪ್ರಶಂಸೆ' ಎಂದೆ ಸ್ವೀಕರಿಸಿ ಆನಂದಿಸಿದಳೆ ? ಹಿಂದೆಂದೂ ಒಬ್ಬ ಪರಿವ್ರಾಜಕನಿಂದ ಇಂಥ ಮಾತುಗಳನ್ನು ಕೇಳದಿದ್ದ ಸೀತೆಗೆ ಇವನು ವೇಷಧಾರಿ ಇರಬೇಕು ಎಂಬ ಅನುಮಾನ ಈ ಕ್ಷಣದಲ್ಲಿ ಬರಲಿಲ್ಲವೆ ? ಗೋವಿಂದ ರಾಜರ ವ್ಯಾಖ್ಯಾನದಂತೆ 'ಯತಿ ವೇಷವನ್ನು ಧರಿಸಿದ್ದ ಆ ರಾವಣನ ವ್ಯವಹಾರದಲ್ಲಿ ಅನೇಕ ದೋಷಗಳನ್ನು ನೋಡಿ ಕಪಟಿಯೆಂದರಿತರೂ, ಆತನಲ್ಲಿ ದ್ವೇಷವನ್ನು ತೋರಲು ಅಸಮರ್ಥಳಾಗಿ (ಕಾಷಾಯ ದಂಡಮಾತ್ರೇಣ ಯತೀಪೂಜ್ಯೋಯನ ಸಂಶಯಃ ಎಂಬ ನಾಣ್ಣುಡಿ ತಿಳಿದಿದ್ದಳಾದ ಕಾರಣ) ಅವರನ್ನು ಯಥಾವತ್ತಾಗಿ ಅತಿಥಿ ಸತ್ಕಾರಕ್ಕೆಂದು ಕರೆದಳು". ಆದರೆ, ಮಹೇಶ್ವರ ತೀರ್ಥರ ಅಭಿಪ್ರಾಯದಂತೆ "ಯತಿ ವೇಷಧಾರಿಯಾದ ರಾವಣನು ಸೀತೆಗೆ ಸೌಮ್ಯನಾಗಿ ಕಾಣುತ್ತಿದ್ದ (ತದಾನಂ ಸೌಮ್ಯ ದರ್ಶನಂ) ...ಇದು ಮೈಥಿಲಿಯ ಮುಗ್ಧತ್ವವನ್ನು ಪ್ರಕಟಗೊಳಿಸಿದೆಯಲ್ಲದೆ ಆಕೆಯ ಸರ್ವವೇತೃತ್ವವನಲ್ಲ" ಪೋಲಂಕಿ ರಾಮಮೂರ್ತಿಯವರ ಅಭಿಪ್ರಾಯದಲ್ಲಿ ಸೀತೆಯು ಗುಪ್ತವಾಗಿ ಆ ಲೈಂಗಿಕ ವರ್ಣನೆಯನ್ನು ಸವಿಯುತ್ತಾ 'ಚಾರುಸ್ಮಿತ'ಳಾಗುತ್ತಾಳೆ....ಆ ವರ್ಣನೆ ಅವಳಿಗೆ ಎಷ್ಟು ಸಮ್ಮೋಹಕವೆಂದರೆ ಅವಳು ರಾಮನ ಬಗೆಗಿನ ಕಳವಳವನ್ನು ಮರೆತುಬಿಡುತ್ತಾಳೆ ...ಸೀತೆ, ಲಕ್ಷ್ಮಣ, ತನ್ನ ಬಗ್ಗೆ ಲೈಂಗಿಕ ಯೋಚನೆ ಮಾಡಿದ್ದಾನೆಂದು ಊಹಿಸಿ ಕೆಂಡ ಕಾರಿದವಳು 'ಬ್ರಾಹ್ಮಣ' ಅವಳನ್ನು ಲೈಂಗಿಕವಾಗಿ ಅಂಗವಿನ್ಯಾಸ ಚಲನವಲನಗಳಲ್ಲಿ ಮೆಲಕು ಹಾಕುತ್ತಿರಲು ಅವನನ್ನು ತಡೆಯುವುದಾಗಲಿ ದೇಹ ಭಾಗಗಳನ್ನು ಮುಚ್ಚಿಕೊಳುವುದಾಗಲಿ ಮಾಡಲಿಲ್ಲ. ಸೀತೆ ರಾವಣನನ್ನು ಒಲ್ಲೆನೆನ್ನುವುದಕ್ಕೆ ಪ್ರಬಲವಾದ ಕಾರಣ ಅವನು ರಾಮನಂತೆ 'ಆರ್ಯನಲ್ಲ', ಅವನು 'ರಾಕ್ಷಸ' ಎನ್ನುವ ಆರ್ಯ ದ್ರಾವಿಡ ಪ್ರಭೇದವೇ ಕಾರಣವಿರುವಂತೆ ಕಾಣುತ್ತದೆ".

ರಾವಣ ಕಂಡದ್ದು, ರಾಮನೇನಾಗಿದ್ದನೊ ಎಂದು ದುಃಖಿಸುತ್ತಾ ಪರ್ಣಶಾಲೆಯಲ್ಲಿ ಕುಳಿತಿರುವ ಸೀತೆಯನ್ನು (ಆಸೀನಾಂ ಪರ್ಣಶಾಲಾಯಾಂ ಭಾಷ್ಪ ಶೋಕಾಭಿ ಪೀಡಿತಾಂ). ಹಾಗೆ ಕುಳಿತಿರುವ ವೈದೇಹಿ ರಾವಣನ ಕಾಮುಕ ಕಣ್ಣುಗಳಿಗೆ–ಬಹುಶಃ ಮಂದಸ್ಮಿತಳಾದ ವೈದೇಹಿಗಿಂತ–ಮೋಹಕಳಾಗಿ ಕಾಣುತ್ತಾಳೆ. ಅವಳನ್ನು ಕಂಡು, ರಾವಣ ಮನ್ಮಥನ ಬಾಣಗಳಿಗೆ ತುತ್ತಾಗುತ್ತಾನೆ. ಬ್ರಾಹ್ಮಣ ವೇಷಧಾರಿಯಾದ್ದರಿಂದ ವೇದ ಘೋಷ ಮಾಡುತ್ತಾನೆ. ಅವನನ್ನು ಕಂಡು, ವೇದ ಘೋಷ ಕೇಳಿ ಸೀತೆ ಎದ್ದು ನಿಂತಳೆ ? ವಾಲ್ಮೀಕಿ ಏನೂ ಹೇಳುವುದಿಲ್ಲ. ಅಷ್ಟೇ ಅಲ್ಲ ರಾವಣನು ಸೀತೆಯನ್ನು ಕುರಿತು "ಪ್ರಶಂಸೆ" ಅರ್ಥಾತ್ ಲೈಂಗಿಕ ವರ್ಣನೆ ಮಾಡುವಾಗ ಸೀತೆ ಏನೂ ಮಾಡುತ್ತಿದ್ದಳೆಂದು, ಕವಿ ಹೇಳುವುದಿಲ್ಲ. ಅವನ ಮಾತೆಲ್ಲಾ ಮುಗಿದ ಮೇಲ್ಲೆ, ಸೀತೆ, "ದ್ವಿಜಾತಿ ವೇಷೇಣ ಹಿ ತಂ ದೃಷ್ಟ್ವಾ ರಾವಣ ಮಾಗತಂ" ಎನ್ನುತ್ತಾನೆ ವಾಲ್ಮೀಕಿ.

ವಾಲ್ಮೀಕಿ ಇಲ್ಲಿ ಸೀತೆಯ ಪ್ರತಿಕ್ರಿಯೆಯು
ಏನೂ ಹೇಳದೆ, ಬಹಳ ಹೇಳುತ್ತಿದ್ದಾನೆ
ಸುತ್ತದೆ. ರಾಮ ಕ್ಷೇಮ ಕಾತರಳಾದ
ಯ ಮನಸ್ಸು ಅದರಲ್ಲೇ ಮುಳುಗಿ ಹೋಗಿದೆ.
ಣನೊಂದಿಗಿನ ವ್ಯವಹಾರ ಅವಳ ಮನಸ್ಸನ್ನು
ಬ್ಧಗೊಳಿಸಿದೆ. ಈ ಮನಸ್ಥಿತಿಯಲ್ಲಿ, ಆಶ್ರ
ಲ್ಲಿ ಆಕೆ ಕುಳಿತಿದ್ದಾಳೆ. ಈ ಸಂದರ್ಭದಲ್ಲಿ
ವ್ರಾಜಕ ಬಂದಿದ್ದಾನೆ. ಅವನು ಬಂದಿರುವು
ಅವಳ ಪ್ರಜ್ಞೆಯ ಹೊರ ಅಂಚು ಗಮನಿಸಿ
, ಅವನ ಮಾತುಗಳನ್ನು ಕೇಳುತ್ತಿದ್ದರೂ
ಆಂತರ್ಯಕ್ಕೆ ಪ್ರವೇಶಿಸಿಲ್ಲ. ಬಂದ ವ್ಯಕ್ತಿ
ವ್ರಾಜಕನಾದುದ್ದರಿಂದ, ಅಂಥವರನೇಕರನ್ನು
ರುವ ಸೀತೆಗೆ ಅದು ತಕ್ಷಣ ಹೊಡೆದೆಬ್ಬಿಸುವ
ಕ್ಯದ ಘಟನೆಯಾಗಿಲ್ಲ. ಈ ಸಂಶ್ಲಿಷ್ಟ ಮನ
ಯಲ್ಲಿ-ಕುಳಿತಿರುವ ಆಕೆಯ ಸೆರಗು ಜಾರಿದೆ,
ಅಂಗಾಂಗ ಸೌಷ್ಠವದ ಚೆನ್ನಾಗಿ ಗೋಚರಿಸು
ಉಟ್ಟವಸನ ಅಸ್ತವ್ಯಸ್ತವಾಗಿದೆ.
ಇಂಥ ಸೀತೆಯನ್ನು ರಾವಣ ಕಾಣುತ್ತಾನೆ;
ಡುತ್ತಾನೆ. "....ಕಾತ್ವಂ ಕಾಂಚನ ವರ್ಣಾಭೇ
ಕೌಶೇಯ ವಾಸಿನೀ ?" ಎಂದು ಪ್ರಶ್ನಿಸು
ಸೀತೆಯಿಂದ ಉತ್ತರವಿಲ್ಲ. ಅವಳನ್ನು
"....ಭೂತಿರ್ವಾತ್ವಂ ವರಾರಾಹೇ ರತಿರ್ವಾ
ಚಾರಿಣೀಂ"—ಎನ್ನುತ್ತಾನೆ. ಅದಕ್ಕೂ
ಉತ್ತರವಿಲ್ಲ. ಸರಿ, ತನ್ನ ಕಣ್ಣಿಗೆ ಹಬ್ಬ
ಪ್ರತ್ಯಕ್ಷವಾಗಿ ಕಾಣುತ್ತಿರುವ ಅವಳ ದೇಹದ
ನ್ನು ಕಣ್ಣಿನಿಂದ ಹೀರುತ್ತಾ, ಸೀತೆಯನ್ನು
ಧಿಸಿ ಮಾತಾಡುತ್ತಿದ್ದರೂ, ತನಗೆ ತಾನೇ
ಸಿಕೊಳ್ಳುತ್ತಾ, ಸ್ವಗತ ನಡೆಸಿ ಕಂಡದ್ದನ್ನು
ಗಿ ವರ್ಣಿಸುತ್ತಾ (ವರ್ಣಿಸಿಕೊಳ್ಳುತ್ತಾ)
ನ್ನು ಕಂಡದ್ದರ ಆಧಾರದ ಮೇಲೆ ಕಲ್ಪಿಸಿ
ತ್ತಾ (ವರ್ಣಿಸಿಕೊಳ್ಳುತ್ತಾ) ತೃಪ್ತಿಪಟ್ಟು
ತ್ತಾನೆ. ರಾವಣ ಸೀತೆ ಇಲ್ಲೆಲ್ಲಾ ನಿರ್ಲಿಪ್ತಳು.
ರ್ಭದಲ್ಲಿ ಕವಿ ಸೀತೆಯನ್ನು ಹೆಚ್ಚಾಗಿ
' ಎಂದರೆ 'ವಿದೇಹ ದೇಶದವಳು' ಎಂಬು
ಗುವಂತೆ, 'ದೇಹವಿಲ್ಲದವಳು' ಎಂದೂ
ಗುತ್ತದೆ.

ವಳು ಪ್ರಜ್ಞಾಪೂರ್ವಕವಾಗಿ ಅವನನ್ನು
ದ ಮೇಲೆ, ಅವನು ದ್ವಿಜನೆಂದು ತಿಳಿದು
ಅತಿಥಿ ಸತ್ಕಾರ ಮಾಡುವುದರ ಕಡೆಗೆ
ರಿಸುತ್ತಾಳೆ.

ಸಂದರ್ಭದ ನನ್ನ ವಿಶ್ಲೇಷಣೆಯನ್ನು
ಪ್ಪುವುದಾದರೆ. ಗೋವಿಂದರಾಜ, ಮಹೇ
ರ ಅಭಿಪ್ರಾಯಗಳಾಗಲಿ, ಪೋಲಂಕಿ
ಮೂರ್ತಿಯವರ ಅಭಿಪ್ರಾಯವಾಗಲಿ ನಿಲ್ಲ

ಲಾರವು, "ಆ ಬ್ರಾಹ್ಮಣನು ತನ್ನ ಅಂಗಾಂಗ ವರ್ಣನೆಯನ್ನು ಲೈಂಗಿಕವಾಗಿ ಮಾಡುತ್ತಿರುವಾಗ ಅದನ್ನು ಅನುಮೋದಿಸುವಂತೆ, ಆನಂದಿಸುವಂತೆ ಅವಳ ದೇಹ ಭಾಗಗಳು ಲೈಂಗಿಕವಾಗಿ ಸ್ಪಂದಿಸುತ್ತವೆ............ತನ್ನ ಕಣ್ಣು ಮುಂದೆ ನಡೆಯುವ ಕಾಮೋದ್ರಿಕ್ತ ಸ್ತನಗಳ ಭೌತಿಕ ವ್ಯಾಪಾರವನ್ನು ವಿವರವಾಗಿ ಚಿತ್ರಿಸುತ್ತಾ (ರಾವಣ) ಸವಿಯುತ್ತಿದ್ದಾನೆ. ಸೀತೆಯೂ ಗುಪ್ತವಾಗಿ ಆ ಲೈಂಗಿಕ ವರ್ಣನೆಯನ್ನು ಸವಿಯುತ್ತಾ "ಚಾರುಸ್ಮಿತಳಾಗುತ್ತಾಳೆ" ರಾಮಮೂರ್ತಿಯವರ ಈ ಅಭಿಪ್ರಾಯ ಸಂದರ್ಭದ ಸಂಕೀರ್ಣತೆಯನ್ನು ಗಮನಿಸದೆ ಬಂದದ್ದಾಗಿದೆ. ರಾವಣನೇನೋ ಸೀತೆಯ ಚೆಲುವನ್ನು ಕಾಮುಕನಾಗಿ ಕಂಡು ಸವಿಯುತ್ತಿದ್ದಾನೆ. ನಿಜ; ಆದರೆ, ಸೀತೆ? ಅವಳ ಮನಸ್ಥಿತಿ ಅತ್ಯಂತ ಜಟಿಲವಾದದ್ದಾಗಿದೆ. ಆ ಜಟಿಲತೆಯನ್ನು ವಾಲ್ಮೀಕಿಯ "ಮೌನ" ಅತ್ಯಂತ ಸಮರ್ಪಕವಾಗಿ, ನಾನು ಮೇಲೆ ಬರೆದಂತೆ ವ್ಯಂಜಿಸುತ್ತದೆ.

---

(3ನೇ ಪುಟದಿಂದ)

ಸಾಹಿತ್ಯದಲ್ಲೇ ಕೇಂದ್ರೀಕರಿಸಿದ್ದೀನೇನೋ ನಿಜ. ಆದರೆ ಇಂಗ್ಲಿಷ್ ಭಾಷೆಯಲ್ಲೂ ಇಂನೂ ಕೂಡ ಒಂದಿಷ್ಟೇನನ್ನಾದರೂ ಬರೆಯುತ್ತಿರುತ್ತೇನೆ. ಆದರೆ ಅದೇ ಪ್ರಧಾನವಲ್ಲ. ಏಕೆಂದರೆ ಮಾತೃಭಾಷೆಯಲ್ಲಿನ ಹಲವಾರು ಸಾಧ್ಯತೆಗಳನ್ನು ತಡೆಹಿಡಿಯುವ ಮತ್ತು ಸಂಸ್ಕೃತಿಗಳೊಳಗಿನ ಸೂಕ್ಷ್ಮ ವ್ಯತ್ಯಾಸ ಸ್ಪಂದನಗಳಿಂದ ಹೊರತಾಗುವ ಇಂಗ್ಲೀಷ್ ಭಾಷೆ ನಮಗೆ ತೀರಾ ಅವಶ್ಯಕವೇನೂ ಅಲ್ಲವಲ್ಲ" ಎಂದಿದ್ದಾರೆ.

ವಸಾಹತುಶಾಹಿ ಪಟ್ಟಭದ್ರಹಿತಾಸಕ್ತಿಗಳು ಅಧಿಕಾರಿಗಳು ಇಂಗ್ಲಿಷ್‌ನಲ್ಲಿ ಏನನ್ನು ಬರೆದರೂ ಹೆದರುವುದಿಲ್ಲ. ಆದರೆ ಬಹುಸಂಖ್ಯಾತ ಸಾಮಾನ್ಯ ಜನರು ಮಾತನಾಡುವ ಪ್ರಾದೇಶಿಕ ಭಾಷೆಯಲ್ಲಿ ಏನನ್ನಾದರೂ ಬರೆದರೆ ಅವರ ಪ್ರತಿಕ್ರಿಯೆ ಇರುತ್ತದೆ. ಈ ಪರಿಸ್ಥಿತಿ ಇಂದಿಗೂ ಆಫ್ರಿಕಾ, ಏಷ್ಯಾ ಮತ್ತು ಲ್ಯಾಟೀನ್ ಅಮೇರಿಕಾಗಳಲ್ಲಿದೆ.

"ಆಫ್ರಿಕಾದೊಳಗೆ ನವ ವಸಾಹತುಶಾಹಿಯ ಪ್ರಭಾವದಿಂದ ಹೊರಬಂದು ತಮ್ಮ ಸಂಸ್ಕೃತಿಯ ತಮ್ಮತನವನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಮಾತೃಭಾಷೆ, ಪ್ರಾದೇಶಿಕ ಭಾಷೆಗಳ ಅಭಿವೃದ್ಧಿಯೊಂದೇ ಮುಖ್ಯಮಾರ್ಗವಾಗಿದೆ. ನಮ್ಮ ಸ್ಥಳೀಯ ಭಾಷೆಗಳಿಗೆ ಆಧುನಿಕ ಜ್ಞಾನ, ತತ್ತ್ವಜ್ಞಾನಗಳೆಲ್ಲವನ್ನೂ ಹಿಡಿದಿಟ್ಟುಕೊಳ್ಳುವ ಶಕ್ತಿ ಇದೆ ಎಂಬುದನ್ನು ನಾವು ತೋರಿಸಿ ಕೊಡಬೇಕು. ಮತ್ತು ಅತ್ಯಂತ ಹೆಚ್ಚು ಜನರಿಗೆ ತಲುಪಬೇಕಾದಲ್ಲಿ ಈ ಭಾಷೆಗಳ ಅವಶ್ಯಕತೆ ಎಷ್ಟಿದೆ ಎಂಬುದನ್ನು ಮನಗಾಣಬೇಕು. ಹಳೆಯ ಬದುಕಿಗೆ ಮತ್ತೆ ಮರಳುವ ಈ ಮಾತುಗಳು ಕೆಲವೇ ವ್ಯಕ್ತಿಗಳು ಹೇಳುವಂತಹುದಲ್ಲ. ವಿದೇಶಿ ಸಂಸ್ಕೃತಿಯ ವಿರುದ್ಧ ನಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡು ಹೋಗುವಲ್ಲಿ ಇದು ಅತಿ ಅನಿವಾರ್ಯ. ಇದು ಅಭಿವೃದ್ಧಿ ಸೂಚಕ. ಅವನತಿ ಸೂಚಕವಲ್ಲ. ಜನರು ತಮ್ಮ ಸ್ವಂತಿಕೆ, ಪ್ರತಿಭೆಗಳನ್ನು ಮನಗುಡು ಹೊರಹೊಮ್ಮಿಸಲು ಇದು ಮುಖ್ಯ ಮಾರ್ಗ ಎಂದೂ ಎನ್‌ಗುಗಿಯವರು ಒತ್ತಿ ಹೇಳಿದ್ದಾರೆ.

---

## PANCHAMA


(Form IV See Rule 8)

| | | |
|---|---|---|
| 1 | Place of publication : | Mysore, Karnataka State |
| 2 | Periodicity of publication : | Fortnightly |
| 3 | Printer's Name : | H. Govindaiah |
| | Whether the Citizen of India : | Yes |
| 4 | Editor's Name : | H. Govindaiah |
| | Whether the citizen of India : | Yes |
| 5 | Name & address of individuals who own the News Paper and partners or Share holder, holding more than one percent of the capital | 1 H. Govindaiah<br>2 Indudhara Honnapura<br>3 Shivaji Ganeshan<br>4 Shivamalla Devanoor<br>5 Ramadeva Rakhe |

407, 14th Main, S. puramMysore-9

H. Govindaiah, hereby declare that the particulars above are true to the best of my knowledge and belief.

Place : Mysore
Date : 15-7-85

(Sd) H. Govindaiah
Signature of publisher

# ಜಾತ್ಯಾತೀತ, ಪ್ರಗತಿಪರ ಐಕ್ಯಭಾರತ ನಿರ್ಮಾಣಕ್ಕೆ
# ಇಂದು ಮತ್ತೊಮ್ಮೆ ಪಣ ತೊಡೋಣ

## ಈ ಚಿರಸ್ಮರಣೀಯ ದಿನದಂದು 35 ವರ್ಷಗಳ ಹಿಂದೆ ಭಾರತದ ಜನತೆ ತನ್ನ ಆಶೆ, ಆಕಾಂಕ್ಷೆಗಳನ್ನು ವಿಜಯ ಪತಾಕೆಯೊಂದಿಗೆ ಅಭಿವ್ಯಕ್ತಿಗೊಳಿಸಿತು.

ನಮ್ಮ ದೇಶದ ಪ್ರತಿಯೊಂದು ರಾಜ್ಯವೂ ಜನತೆಯ ಆಸೆ, ಆಶೋತ್ತರಗಳನ್ನು ಪ್ರತಿಬಿಂಬಿಸುತ್ತದೆ. ಇಡೀ ರಾಷ್ಟ್ರದ ವೈಭವವನ್ನು ಸಾರುತ್ತದೆ. ಪ್ರತಿ ರಾಜ್ಯವೂ ಈ ದಿಸೆಯಲ್ಲಿ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಕರ್ನಾಟಕ ಈ ನಿಟ್ಟಿನಲ್ಲಿ ಇತಿಹಾಸ ಹೊಂದಿದೆ.

ಅನಾದಿ ಕಾಲದಿಂದಲೂ ಕರ್ನಾಟಕದ ಜನತೆ ಸಹಿಷ್ಣುಪರರು. ಇಲ್ಲಿ ಜೈನ ಮತ್ತು ಬೌದ್ಧ ಮತಗಳು ಪ್ರವೃದ್ಧಮಾನಗೊಂಡವು. ಕರ್ನಾಟಕದೊಂದಿಗೆ ಶಂಕರ, ಮಾಧ್ವ, ರಾಮಾನುಜ ಮತ್ತು ಬಸವಣ್ಣನವರ ನಂಟು ಅಪಾರ, ಅಮೋಘ. ಅನಂತರ ಮುಸಲ್ಮಾನರ ಮತ್ತು ಕ್ರೈಸ್ತ ಗುರುಗಳು ಹಿಂದೂ ಸಂತರು ಸಹಿಷ್ಣುತೆಯ ತತ್ವವನ್ನು ಶ್ರೀಮಂತಗೊಳಿಸಿದರು. ಇಂದಿಗೂ ಗುಡಿ ಗೋಪುರಗಳು, ಇಗರ್ಜಿಗಳು, ಮಸೀದಿಗಳು ಒಂದರೊಡನೊಂದು ಇರುವುದೇ ಇದಕ್ಕೆ ಸಾಕ್ಷಿ.

ಇದು ಕರ್ನಾಟಕ ರಾಜ್ಯ. ಪರರ ಬಗ್ಗೆ ಅಪಾರ ಆದರ, ದ್ವೇಷ ರಹಿತ, ಸಹನಾಭಾವ, ಪ್ರಾಯಶಃ ಇತಿಹಾಸ ಕಲಿಸಿಕೊಟ್ಟ ಪಾಠ. ಗಂಗರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಮೌರ್ಯರು ಮತ್ತು ವಿಜಯನಗರದ ರಾಯರುಗಳು ತಮ್ಮ ಶ್ರೀಮಂತ ಸಂಸ್ಕೃತಿಯನ್ನು ಇಲ್ಲಿ ಉಳಿಸಿ ಹೋಗಿದ್ದಾರೆ. ಅನಂತರ ಬಿಜಾಪುರದಲ್ಲಿ ಮುಸಲ್ಮಾನರು, ಮಂಗಳೂರಿನಲ್ಲಿ ಕ್ರೈಸ್ತರು, ಈ ಸಂಸ್ಕೃತಿಗೆ ತಮ್ಮದೇ ಆದ ವೈಶಿಷ್ಟ್ಯವನ್ನು ಲೇಪಿಸಿದ್ದಾರೆ.

ರಾಜ್ಯದಲ್ಲಿ ಕವಿಗಳು, ದಾರ್ಶನಿಕರು, ತತ್ವಜ್ಞಾನಿಗಳು ಜನಿಸಿದ್ದು ಶತಮಾನಗಳಿಂದ ಇವರುಗಳು ಜನತೆಯ ಮನಸ್ಸನ್ನು ಸುರೂಪಗೊಳಿಸಿದ್ದಾರೆ.

19ನೇ ಶತಮಾನದ ಅಂತ್ಯದ ವೇಳೆಗೆ ರಾಷ್ಟ್ರೀಯ ಭಾವ ಉದ್ದೀಪನಗೊಂಡು ದೇಶಭಕ್ತಿ ಪ್ರಚೋದನೆಗೊಂಡಿತು. ಟಿಪ್ಪುಸುಲ್ತಾನರಿಂದ ಕಿತ್ತೂರು ರಾಣಿ ಚೆನ್ನಮ್ಮನವರೆಗೆ ನಾನಾಮತಗಳ ನಾಯಕರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸ್ವಾತಂತ್ರ್ಯಗಳಿಕೆಗೆ ಶ್ರಮವಹಿಸಿದ್ದಾರೆ.

ಇಂದು ಕರ್ನಾಟಕ, ಇತರ ರಾಜ್ಯಗಳೊಂದಿಗೆ ಒಂದಾಗಿ ಗತ ವೈಭವಕ್ಕನುಗುಣವಾದ ನವ ಭಾರತ ನಿರ್ಮಾಣದಲ್ಲಿ ಕ್ರಿಯಾಶೀಲವಾಗಿದೆ.

ಕೈಗಾರಿಕಾ ಕ್ರಾಂತಿಯಲ್ಲೂ ಕರ್ನಾಟಕ ಮುಂಚೂಣಿಯಲ್ಲಿದೆ. ವಿಶ್ವೇಶ್ವರಯ್ಯನವರಂತಹ ದಿಗ್ಗಜರು ಹಾಕಿದ ದಾರಿಯಲ್ಲಿ ನಡೆದಿದೆ. ಇಂದು ಎಲ್ಲರಿಗೂ ಶಿಕ್ಷಣ ಉಚಿತವಾಗಿ ಲಭ್ಯವಾಗಿದೆ. ಶೇಕಡಾ 80ಕ್ಕೂ ಹೆಚ್ಚು ಗ್ರಾಮೀಣ ಪ್ರದೇಶಗಳಿಗೆ ಕುಡಿಯುವ ನೀರು ಮತ್ತು ವಿದ್ಯುಚ್ಛಕ್ತಿ ಒದಗಿಸಲಾಗಿದೆ. ಶಿಶು ಮತ್ತು ಮಹಿಳಾ ಕಲ್ಯಾಣ ಮತ್ತು ಗ್ರಾಮಾಂತರ ಪ್ರದೇಶದ ಜನರ ಆರೋಗ್ಯಕ್ಕೆ ಗಮನ. ಜನತೆಯ ಆಶಯಗಳನ್ನು ಕ್ರಮೇಣ ಈಡೇರಿಸಲಾಗುತ್ತಿದೆ. ಸಾರಿಗೆ ಸಂಪರ್ಕ ವ್ಯವಸ್ಥೆ ಶೀಘ್ರ ಗತಿಯಲ್ಲಿ ಬೆಳೆಯುತ್ತಿದೆ. ದೀನರ ಉದ್ಧಾರ ದಲಿತರ ಕಲ್ಯಾಣಕ್ಕೆ ಅಗಾಧ ಶ್ರಮವಹಿಸಲಾಗುತ್ತಿದೆ.

ಎಲ್ಲಾ ಮತಗಳ, ಜಾತಿಗಳ, ವರ್ಗಗಳ ಭಾಷೆಗಳ ಜನರು ಇಲ್ಲಿ ಅನ್ಯೋನ್ಯವಾಗಿ ಬಾಳುತ್ತಿದ್ದು ಅಭ್ಯುದಯದತ್ತ ಮುನ್ನಡೆದಿದ್ದಾರೆ.

ಸಾಧಿಸಬೇಕಾದುದು ಇನ್ನೂ ಬಹಳವಿದೆ.
ಇಂದು ಕರ್ನಾಟಕದ ಜನತೆ ಅವರ ಗುರಿಯತ್ತ ಮುನ್ನಡೆದಿದ್ದಾರೆ.

## ಕರ್ನಾಟಕ ವಾರ್ತೆ

# ಜಾತೀಯತೆ ನಡುವೆ ನಲುಗುತ್ತಿರುವ ಪ್ರೀತಿ ಪ್ರೇಮ

ದೇಶದ ತುಂಬುಬಡತನಕ್ಕಿಂತಲೂ, ಜನತೆಯ ಸಂಕಷ್ಟಕ್ಕಿಂತಲೂ, ದೇಶದ ಪ್ರಗತಿಗಿಂತಲೂ ನಮಗೆ ಸವಾಲಾಗಿ ನಿಂತಿರುವುದು, ಮಾನವೀಯತೆಗೆ ಘೋರ ಅಪಚಾರವೆಸಗಿದ ಅಸ್ಪೃಶ್ಯತೆ ಹಾಗು ಮಾನವ ಮಾನವರೊಳಗಿರಬೇಕಾದಪ್ರೀತಿಪ್ರೇಮಕ್ಕೆ ತೊಡಕಾಗಿರುವ ಜಾತೀಯತೆ.

ಇಂಥ ಅಸ್ಪೃಶ್ಯತೆ, ಜಾತೀಯತೆಯ ನೋವುಂಡ ಡಾ॥ ಬಿ. ಆರ್. ಅಂಬೇಡ್ಕರ್‌ರವರು ನಮ್ಮ ದೇಶದಲ್ಲಿ ಅಸ್ಪೃಶ್ಯರಾಗಿ ಹುಟ್ಟಿ ಎಲ್ಲಾ ಕಷ್ಟನೋವು ಅವಮಾನಗಳೊಡನೆ ಬದುಕಿ, ಜನತೆಯಲ್ಲಿ ಹೊಸ ಚಿಂತನೆಗೆ ಎಡೆಮಾಡಿ, ದಲಿತರ, ಬಡವರ ಬದುಕನ್ನು ಸುಂದರಗೊಳಿಸಲು ಪ್ರಯತ್ನಿಸಿ, ಅವರ ಆಳದ ನೋವಿನ ದುಃಖಕ್ಕೆ ಸ್ಪಂದಿಸಿ, ಅವರನ್ನು ಎಲ್ಲ ರೀತಿಯಿಂದಲೂ ಮೇಲೆತ್ತಲು ಅಹರ್ನಿಸಿ ದುಡಿದು, ತನ್ನನ್ನು ಇಡೀ ಮನುಕುಲದ ಕಲ್ಯಾಣಕ್ಕಾಗಿ ಅರ್ಪಿಸಿದ ಡಾ॥ ಅಂಬೇಡ್ಕರ್‌ರವರು ಇಂದು ದೇಶದ ನೊಂದವರ, ದಲಿತರ, ಬಡವರ ಮನಸ್ಸಿನಲ್ಲಿ ಸದಾ ಹಚ್ಚ ಹಸುರಾಗಿ ಇದ್ದಾರೆ. ಅವರ ಜನ್ಮದಿನವಾದ ತಾ॥ 14–4–1985ನೇ ದಿನವನ್ನು ದೇಶದ ಉದ್ದಗಲಕ್ಕೂ ಆಚರಿಸಿದರೂ, ಅವರ ಜನ್ಮ ದಿನಾಚರಣೆಗಿಂತಲೂ, ಅವರ ವಿಚಾರವನ್ನು ಮೆಲುಕು ಹಾಕುವುದರೊಡನೆ, ಅವರು ಯಾಕಾಗಿ ಚಿಂತಿಸಿದರು, ಎಂದು ಇಂದು ಎಲ್ಲರು ಆಲೋಚಿಸಬೇಕಾಗಿದೆ.

ಈ ಪುಣ್ಯನಾಡಲ್ಲಿ ಕವಿಗಳು, ತಪೋಮುನಿಗಳು, ಪುಣ್ಯಪುರುಷರು, ಮಹಾತ್ಮರುಗಳು ಹುಟ್ಟಿದ್ದಾರೆ. ಪವಿತ್ರ ನದಿಗಳು ಹರಿದಿವೆ. ಅನೇಕ ಧರ್ಮ ಪುರುಷರಿಗೆ ಜನ್ಮವಿತ್ತಿದೆ. ಆದರೆ ಇವೆಲ್ಲವುಗಳ ಹಿಂದೆ ಅಗೋಚರವಾಗಿ ಚರಿತ್ರೆಯ ಉದ್ದಕ್ಕೂ ಮಾನವೀಯತೆಗೆ ಅಪಚಾರವೆಸಗುತ್ತ ತಾಳಲಾರದ, ಹೇಳಲಾರದ, ತಿಳಿಸಲಾರದ, ಬದುಲಿಸಲಾಗದ, ಬದುಕಿನ ಉದ್ದಕ್ಕು ಬದುಕುತ್ತಾ, ಎಲ್ಲರಿಗೂ ನೋವನ್ನು ನೀಡುತ್ತಾ ಬಂದಿರುವ ಈ ಅಸ್ಪೃಶ್ಯತೆ ಹಾಗು ಜಾತಿಯತೆ, ಈಗ ಇಡೀ ಮಾನವ ಸಮುದಾಯಕ್ಕೆ ಒಂದು ಸವಾಲಾಗಿ ನಿಂತಿದೆ. ಇದನ್ನು ಕಂಡೇ ಡಾ॥ ಅಂಬೇಡ್ಕರ್‌ರವರು ಈ ದೇಶದಲ್ಲಿ ಮಹಾತ್ಮರು ಹುಟ್ಟಿದ್ದಾರೆ, ಹೋಗಿದ್ದಾರೆ, ಆದರೆ ಅಸ್ಪೃಶ್ಯತೆ ಮಾತ್ರ ಇನ್ನೂ ಜೀವಂತವಾಗಿಯೇ ಉಳಿದುಕೊಂಡಿದೆ; ಎಂದು ನೊಂದು ನುಡಿದಿದ್ದರು. ಅಂದಿನ ಅವರ ಮಾತು ಇಂದಿಗೂ ಸತ್ಯ.

ಅಂದು ಗಾಂಧೀಜಿಗೆ ಅಸ್ಪೃಶ್ಯತೆಗಿಂತ ಸ್ವಾತಂತ್ರ್ಯಗಳಿಕೆ ಪ್ರಾಮುಖ್ಯವಾದರೆ, ಸ್ವತಃ ಅಸ್ಪೃಶ್ಯತೆಯ ಕಹಿಯುಂಡ ಅಂಬೇಡ್ಕರ್‌ರವರು ಅಸ್ಪೃಶ್ಯತೆ ಹಾಗು ಜಾತಿಯ ನಾಶವೇ ಸ್ವಾತಂತ್ರ ಎಂದು ಬಗೆದಿದ್ದರು. ಅಸ್ಪೃಶ್ಯತೆಯು ಮಾನವ ಜನಾಂಗದಲ್ಲಿ ತನ್ನಿಂದ ತಾನೇ ಹುಟ್ಟಿದ್ದಲ್ಲ. ಅದು ಕೆಲವು ಮಾನವ ಪಂಗಡಗಳ ಸ್ವಾರ್ಥ ಸಾಧನೆಗಾಗಿ ಸೃಷ್ಟಿಯಾಯಿತು. ಇಂಥ ವರ್ಣಾಶ್ರಮಧರ್ಮವೇ ಜಾತಿ, ಮತ ಭೇದಗಳಿಗೆ ಹಾಗು ಅಸ್ಪೃಶ್ಯತೆ ಹುಟ್ಟಲು ಮೂಲ ಪ್ರಚೋದನೆಯಾಯಿತು ಎಂದು ಹೇಳಬಹುದು. ವರ್ಣಾಶ್ರಮಧರ್ಮದಲ್ಲಿ ಗಾಢವಾದ ನಂಬಿಕೆಯಿದ್ದ ಗಾಂಧೀಜಿಯವರು ವರ್ಣಾಶ್ರಮದಿಂದ ಹಿಂದೂ ಸಮಾಜದ ಪುನರ್ ಸಂಘಟನೆ ಸಾಧ್ಯ ಎಂದು ನಂಬಿದ್ದರು. ಆದರೆ ಅದೇ ಹೊತ್ತಿನಲ್ಲಿ ಡಾ॥ ಅಂಬೇಡ್ಕರ್‌ರವರು ನಮ್ಮ ಭಾರತ ದೇಶದಲ್ಲಿ ಮಾನವ ಮಾನವರೊಳಗಿರುವ

---

ಮೋಹನಾಂಗಯ್ಯಸ್ವಾಮಿ

---

ಪ್ರೀತಿಪ್ರೇಮವೆ ಸ್ವಚ್ಛಂದ ಬದುಕಿಗೆ ಜಾತಿ ಹಾಗು ಧರ್ಮಗಳು ಅಡ್ಡಿಯಾಗಿವೆ. ಹಾಗು ಮಾನವ ಮಾನವನನ್ನೇ ಶೋಷಣೆ ಮಾಡಲು ಎಡೆಮಾಡಿವೆ. ಇಂಥ ಹಿಂದೂ ಧರ್ಮ ಗ್ರಂಥಗಳನ್ನೇ ಸುಡಬೇಕೆಂದು ಹೇಳಿದ್ದರು. ಅಂದು ಡಾ॥ ಅಂಬೇಡ್ಕರ್‌ರವರ ಮಾತುಗಳಿಗೆ ದೇಶದಲ್ಲಿ ಬಲವಾದ ಪ್ರತಿಭಟನೆ ಇದ್ದರೂ ಇಂದು ಅವರ ಮಾತುಗಳು ಸಮಾಜದ ಎಲ್ಲಾ ಜನರು ಮೆಲಕುಹಾಕುವ ಸತ್ಯ ವಿಚಾರಗಳಾಗಿವೆ.

ಇಂದು ಕೂಡ ನಮ್ಮ ದೇಶದಲ್ಲಿ ನಿಲ್ಲಲು ನೆಲೆ ಇಲ್ಲದೆ, ತಿನ್ನಲು ಕೂಳಿಲ್ಲದೆ, ಉಡಲು ಚೂರು ಬಟ್ಟೆಯಿಲ್ಲದೆ, ನೊಂದು ಬೆಂದು ನೋವು ಅವಮಾನ ಕಷ್ಟಗಳೊಡನೆ ಬದುಕುತ್ತಿದ್ದರೂ ಈ ನೋವುಂಡ ದಲಿತ, ಬಡಜನತೆಗಳ ನಡುವೆ ಇರುವ ಅಸ್ಪೃಶ್ಯತೆ ಹಾಗು ಜಾತಿಯತೆ ಅಷ್ಟೇ ಕ್ರೂರವಾಗಿ ಭದ್ರವಾಗಿ ಬೇರೂರಿ, ಅವರ ನಡುವೆ ಸಂಘಟಿತರಾಗಲು ತೊಡಕಾಗಿದೆ. ಇಂಥ ಮೌಢ್ಯ ವಿಚಾರಗಳು ಮಾನವನ ಸಹಬಾಳ್ವೆಯಲ್ಲಿ ಎಷ್ಟು ತೊಡಕಾಗಿದೆ ಎಂದು ನಾವು ಕಾಣಬಹುದು.

ಮಾನವ ಹುಟ್ಟಿನಿಂದ ಮೇಲೂ ಅಲ್ಲ, ಕೀಳೂ ಅಲ್ಲ. ಆದರೆ ಈಜಾತಿ ಮತಗಳು ಮಾನವನ ಕಾಯಕಕ್ಕನುಸಾರವಾಗಿ ಜಾತಿಗಳು ಸೃಷ್ಟಿಯಾದರೆ, ಧರ್ಮಗಳು, ಆ ಧರ್ಮ ಸ್ಥಾಪಕನ ಕೆಲವು ಮಾನವೀಯ ವಿಚಾರ ಮೌಲ್ಯಗಳ ನೆಲೆಗಟ್ಟಿನ ಮೇಲೆ ನಿಂತಿದೆ ಎಂದು ಹೇಳಬಹುದು. ಇಂದು ವಿದ್ಯಾವಂತರಲ್ಲೂಪ್ರಗತಿಪರರೆಂದು ಹೇಳಿಕೊಳ್ಳುವ ಜನರಲ್ಲೂ ಜಾತೀಯತೆ ಇರುವುದನ್ನು ನೋಡಿದಾಗ ಈ ಜಾತಿಯ ವಿಷಬೀಜ ಎಷ್ಟೊಂದು ಘೋರ ಅನ್ಯಾಯವನ್ನು ಮಾನವ ಸಮುದಾಯದಲ್ಲಿ ಮಾಡಿದೆ ಎಂದು ಆಲೋಚಿಸಲು ನಿಲುಕದ ವಿಷಯವಾಗಿದೆ.

ವೇಗಗತಿಯಲ್ಲಿ ಉರುಳುತ್ತಿರುವ ಇತಿಹಾಸ ಚಕ್ರದಲ್ಲಿ ಇಂದು ಚಲನ ಚಿತ್ರದಿಂದ, ಹಾಗು ಇನ್ನಿತರ ವಿಚಾರಗಳಿಂದ ನವಯುವಕ ಯುವತಿಯರು ಒಬ್ಬರನ್ನೊಬ್ಬರು ಸ್ವಚ್ಛಂದವಾಗಿ ಪ್ರೀತಿಸಿದರೂ, ಅವರು ಬದುಕಿನುದ್ದಕ್ಕೂ ಜೀವನ ಸಂಗಾತಿಯಾಗಿ ಬದುಕಲು ಅವರ ನಡುವೆ ಜಾತಿಯ ಬೇರೆ ಬೇರೆ ಎಂದು ತಿಳಿದಾಗ, ಈ ಜಾತಿಯೇ ಅವರ ಬದುಕಿಗೆ ಅಡ್ಡಗೋಡೆಯಾಗುತ್ತದೆ. ಇಂಥ ಜಾತಿಯ ಕಪಿಮುಷ್ಠಿಯಲ್ಲಿ ಸಿಕ್ಕಿದ ಯುವಕ ಯುವತಿಯರು ಬೇರೊಂದು ಜಾತಿಯ ಯುವಕ ಯುವತಿಯನ್ನು ಮದುವೆಯಾಗಿ ಜೀವನ ನಡೆಸಲು ಇಚ್ಛಿಸಿದರೂ, ಅದನ್ನು ಬದುಕಿನಲ್ಲಿ ಬದುಕಿ ಜೀವನ ನಡೆಸುವ ಎದೆಗಾರಿಕೆ ಇಂದಿನ ಹೆಚ್ಚಿನ ಯುವಕ ಯುವತಿಯರಲ್ಲಿ ಇಲ್ಲ ಎಂದು ಹೇಳಬಲ್ಲೆ. ಇಂಥ ಪವಿತ್ರ ಪ್ರೀತಿಪ್ರೇಮಕ್ಕೆ ಜಾತೀಯತೆ ಎಷ್ಟು ತೊಡಕೋ, ಅಷ್ಟೇ ಮಾನವ ಮಾನವನನ್ನು ಮುಟ್ಟಲು ಅಸಾಧ್ಯವಾಗಿರುವ ವಿಚಾರ ಹಾಗು ಬದುಕು ಅಷ್ಟೇ ಕ್ರೂರ ಹಾಗು ಘೋರಹೀನ ವಿಷಯವಾಗಿದೆ.

ಅಸ್ಪೃಶ್ಯತೆ ಎಂಬುದು ದಲಿತ ಜನಾಂಗದಲ್ಲಿ ಕಾಣುವ ಒಂದು ವಿಚಾರಕ್ಕಿಂತಲೂ, ಈಗ ಅದು ಜಾತಿ ಜಾತಿಯೊಳಗೆ ಅಂದರೆ ಮೇಲ್ಜಾತಿ ಕೀಳ್ಜಾತಿ ಎಂಬ ಕುರುಡು ನಂಬಿಕೆಗಳ ನಡುವೆ ಬದುಕುತ್ತಿದೆ. ಇಂಥ ಅಸ್ಪೃಶ್ಯತೆಯ ತೊಳಲಾಟದಲ್ಲಿ ಎಲ್ಲಾ ಜಾತಿಗಳು ತಾನು ಮೇಲು, ತಾನು ಮೇಲು ಎಂಬ ಭ್ರಮೆಯಲ್ಲಿ ಜಾತಿಯ ಸಂಘಟನೆಗಳಾಗಿ ಬಲವಾಗಿ ರೂಪುಗೊಳ್ಳುತ್ತಿದೆ. ಇದರಿಂದ ಮಾನವ ಮಾನವರೊಳಗೆ ಜಾತಿಗಳು ನಾಶವಾಗುವ ಬದಲು, ಜಾತಿಗಳು ಭದ್ರವಾಗುತ್ತಾ ಮಾನವ ಸಮುದಾಯ ಅಸಂಘಟಿತವಾಗುತ್ತಾ, ಪ್ರೀತಿ ಪ್ರೇಮಗಳನ್ನು ಛಿದ್ರಗೊಳಿಸಿ ಮಾನವ ಬದುಕಲು ಪ್ರಯತ್ನಿಸುವುದು ಮಾನವ ಸಮುದಾಯದ ದೊಡ್ಡ ದುರಂತ.

ಅಸ್ಪೃಶ್ಯತೆ ಹಾಗು ಜಾತಿಯತೆಯ ವಿರುದ್ಧ

ನಮ್ಮ ದೇಶದಲ್ಲಿ ಅನೇಕ ಮಹಾನಿಯರು ದೊಡ್ಡ ಚಳುವಳಿಗಳನ್ನು ಕೈಗೊಂಡಿದ್ದರು. ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಸ್ಪೃಶ್ಯತೆ ಹಾಗು ಜಾತಿಯತೆಯ ವಿರುದ್ಧ ಬಂಡೆದ್ದ ಪ್ರಮುಖರಲ್ಲಿ ಕುದ್ಮುಲ್ ರಂಗರಾಯರು ಒಬ್ಬರು. ಕರ್ನಾಟಕದಲ್ಲಿ 800 ವರ್ಷಗಳ ಹಿಂದೆ, ಅಸ್ಪೃಶ್ಯತೆ ಹಾಗು ಮೂಢ ನಂಬಿಕೆ ಕಂದಾಚಾರಗಳ ವಿರುದ್ಧ ದೊಡ್ಡ ಧಾರ್ಮಿಕ ಚಳುವಳಿಯನ್ನು ಬಸವಣ್ಣನವರು ನಡೆಸಿದ್ದರು. ಮಹಾರಾಷ್ಟ್ರದಲ್ಲಿ ಬ್ರಾಹ್ಮಣ ವಿರೋಧಿ ಚಳುವಳಿಯನ್ನು ಜ್ಯೋತಿ ಬಾಫೂಲೇ ಕೈಗೊಂಡಿದ್ದರೆ, ತಮಿಳ್ನಾಡಿನಲ್ಲಿ ದೇವರು ಧರ್ಮ, ಜಾತೀಯತೆ, ಮೌಢ್ಯ ವಿಚಾರಗಳ ವಿರುದ್ಧ ಪೆರಿಯಾರ್‌ರವರು ದೊಡ್ಡ ಚಳುವಳಿಯನ್ನೇ ನಡೆಸಿದ್ದರು. ಹೀಗೆ ಪಟ್ಟಿ ಮಾಡುತ್ತಾ ಹೋದರೆ ದೇಶದ ಉದ್ದಗಲಕ್ಕೂ ಅನೇಕರನ್ನು ನಾವು ಕಾಣಬಹುದು.

ಇಷ್ಟೆಲ್ಲಾ ಚಳುವಳಿಗಳು ಜನಸಮುದಾಯದಲ್ಲಿ ಮೊಳಗಿದ್ದರೂ ಅದು ಇನ್ನೂ ಸಮಾಜವನ್ನು ಪರಿವರ್ತಿಸುವಲ್ಲಿಯಾಗಲಿ, ಅಥವಾ ಜಾತಿಮತಗಳ ನಡುವೆ ಇರುವ ಭೇದಗಳನ್ನು ತೊಡೆದು ಹಾಕುವಲ್ಲಿಯಾಗಲಿ ಯಶಸ್ಸನ್ನು ಕಂಡಿಲ್ಲ. ಆದರೆ ಇಂಥ ಚಳುವಳಿಗಳು ಈಗ ದೇಶದ ಉದ್ದಗಲಕ್ಕೂ ಕೆಲವು ಸಂಘಟನೆಗಳಿಂದ ಆಗುತ್ತಿರುವುದು ಶುಭ ಸೂಚನೆಯಾದರೂ ಈ ಎಲ್ಲಾ ಚಳುವಳಿಗಳು ಒಂದು ಪ್ರಗತಿಪರ, ಜನಪರ ಚಳುವಳಿಯಾಗಿ ರೂಪುಗೊಂಡು, ಜನ ಸಮುದಾಯವನ್ನು ಸೇರಿಕೊಂಡು, ಮಾನವನಪ್ರಜ್ಞೆಯನ್ನೇ, ಆಲೋಚಿಸುವ ದಿಕ್ಕನ್ನೇ, ಬದಲಾಯಿಸುವಲ್ಲಿ, ಸಂಘಸಂಸ್ಥೆಗಳು ಮುಂದೆ ಹೆಜ್ಜೆ ಇಡಬೇಕಾಗಿದೆ. ಈ ನಿಟ್ಟಿನಲ್ಲಿ ಸಾಹಿತಿ, ಕಲಾವಿದರ, ಪ್ರಗತಿಪರ ಹಾಗು ಬುದ್ಧಿಜೀವಿಗಳ ಪಾತ್ರ ಬಹುಮುಖ್ಯವಾಗಿದೆ.

ಈ ವಿಷಯದಲ್ಲಿ ಸಾಹಿತ್ಯಗಳು ಹೊಸ ವಿಚಾರಗಳನ್ನು ಪ್ರತಿಪಾದಿಸುತ್ತಾ ಬಂದಿದ್ದರೂ ಅವನ್ನು ಸಾಂಸ್ಕೃತಿಕವಾಗಿ ಜನತೆಯ ಮುಂದೆ ಕೊಂಡೊಯ್ಯುವಲ್ಲಿ ಹಾಗು ಜನತೆಯ ಮನ ಮುಟ್ಟುವ ಹಾಗೆ ತಿಳಿಸುವಲ್ಲಿ ಇಂದಿನ ಸಾಹಿತಿ ಕಲಾವಿದರು ಅಸಮರ್ಥರಾಗಿದ್ದಾರೆ ಎಂದು ಹೇಳಬಹುದು. ಇಂದಿನ ಕೆಲವು ಸಾಹಿತಿಗಳು ಪ್ರಗತಿಪರರೆಂದು ಕಂಡುಬಂದರೂ, ಮೂಢನಂಬಿಕೆ, ಕಂದಾಚಾರಗಳಿಂದ ಹೊರಬರಲು ಅಸಾಧ್ಯವಾಗಿ ತತ್ತರಿಸಿ, ಓದುಗನನ್ನು ದ್ವಂದ್ವ ವಿಷಯಗಳಿಗೆ ಸಿಲುಕಿಸಿ ಮನಸ್ಸನ್ನು ಗೊಂದಲಮಯವನ್ನಾಗಿ ಮಾಡುತ್ತಿದ್ದಾರೆ.

ಇಂದು ಕೇಳಿ ಬರುತ್ತಿರುವ ದಲಿತ ಸಾಹಿತ್ಯ ನವ್ಯ, ನವೋದಯ, ಬಂಡಾಯ ಸಾಹಿತ್ಯಗಳು ವಸ್ತುಸ್ಥಿತಿಯನ್ನು, ಸತ್ಯಾಸತ್ಯತೆಯನ್ನು ಪ್ರತಿಪಾದಿಸುತ್ತಾ ಎಲ್ಲಾ ಜಾತಿ ಧರ್ಮಗಳನ್ನು ಮೆಟ್ಟಿ ನಿಲ್ಲುತ್ತಾ ಮುನ್ನಡೆದರೂ, ಮುಖ್ಯವಾಗಿ ಯಾವುದೇ ಅಳುಕು, ಭಯ ಇಲ್ಲದೆ ನಿರ್ಭೀತಿಯಿಂದ ಮಾನವ ಸಮುದಾಯದ ಕೆಳಸ್ತರದ ಎಲ್ಲಾ ಜನರ ನೋವು ಕಷ್ಟವನ್ನು ಹಾಗು ಮೇಲುವರ್ಗದ ಜನರ ಸುಖ ಭೋಗದ ಲಾಲಸೆಯನ್ನು ಹಾಗು ಇವೆಲ್ಲವುಗಳು ಸಮಾಜದಲ್ಲಿ ತೊಡಕಾಗಿ ಬರುವ ಹಾಗು ತೊಡಕಾಗದೆ ಇರುವ ವಿಚಾರಗಳನ್ನು ಸಾಹಿತ್ಯದಲ್ಲಿ ಮೂಡಿಸುವುದು ಇಂದಿನ ಎಲ್ಲಾ ಸಾಹಿತಿಗಳ ಆದ್ಯಕರ್ತವ್ಯವಾಗಿದೆ.

ಇಂಥ ಸಾಹಿತ್ಯಗಳು ನಮ್ಮ ದೇಶದಲ್ಲಿ ಕೆಲವೇ ಜನರ ಕೈಯಲ್ಲಿ ಸುತ್ತುತ್ತಾ ಬದುಕುತ್ತಿದೆ. ದೇಶದಲ್ಲಿ ನನ್ನ ಪ್ರಕಾರ ಸುಮಾರು 75% ಅನಕ್ಷರಸ್ಥರೇ ಇರುವ ಈ ನಾಡಲ್ಲಿ ವಿದ್ಯಾವಂತರು ಹೆಚ್ಚು ಹೆಚ್ಚು ಪ್ರಗತಿಪರ ಸಾಹಿತ್ಯವನ್ನು ಓದಬೇಕಾಗಿದೆ. ಹಾಗು ಓದಿದ್ದನ್ನು ಓದದವನಿಗೆ ಮತ್ತು ಓದಲು ತಿಳಿಯದವನಿಗೆ ವಿವರಿಸಿ ಹೇಳುವುದು ಇಂದಿನ ಎಲ್ಲಾ ವಿದ್ಯಾವಂತರ ಕರ್ತವ್ಯವಾಗಿದೆ.

ಈ ಬಗ್ಗೆ ಜನತೆ ಹೊಸ ಚಿಂತನೆಯೊಡನೆ ಮಾನವೀಯ ವಿಚಾರ ಹಾಗು ಸಂಘಟನೆಯ ಮೂಲಕ ಮಾನವ ಮಾನವರೊಳಗಿರುವ ಅಸ್ಪೃಶ್ಯತೆ ಹಾಗು ಜಾತೀಯತೆಯನ್ನು ನಾಶ ಮಾಡುವಲ್ಲಿ ಒಂದು ಜನಪರ ಚಳುವಳಿಯನ್ನು ಕಟ್ಟಬೇಕಾಗಿದೆ. ಇಂಥ ಚಳುವಳಿಯು ಪ್ರಗತಿಪರ ಸಂಘಟನೆಗಳಿಂದ ಪ್ರಾರಂಭವಾಗಲಿ ಎಂದು ಆಶಿಸೋಣ, ಹಾಗು ಹಾರೈಸೋಣ.

# ಕಗ್ಗೊಲೆ: ಬಿಹಾರ ದಲಿತರಿಗೆ ಹೊಸ ವರ್ಷದ ಕೊಡುಗೆ!

ಅಂದು, ಒಂದು ಕಡೆ ಹೊಸ ವರ್ಷದ ಆನಂದೋತ್ಸವಗಳಲ್ಲಿ ಮೈ ಮರೆಯಲು ಜನರು ತಯಾರಿ ನಡೆಸುತ್ತಿದ್ದರು. ಆ ವೇಳೆಯಲ್ಲಿ ಇನ್ನೊಂದು ಕಡೆ, ಅಂದರೆ ನಮ್ಮ ದೇಶದ ಬಿಹಾರ ರಾಜ್ಯದ 'ಕೈಥಿಬಿಘಾ' ಗ್ರಾಮದ ದಲಿತರು ತಮ್ಮ ಬದುಕಿನ ಕೊನೆ ಉಸಿರೆಳೆಯಲು ಸಿದ್ಧರಾದರು. ಭಾರತ ದೇಶದ ಮಾನವೀಯ ಬಂಜೆತನವನ್ನು ಇದು ಸ್ಪಷ್ಟಪಡಿಸುವುದು.

1984, ಡಿಸೆಂಬರ್ 31, ಈ ಅನಾಗರೀಕ ದುರ್ಘಟನೆ ಸಂಭವಿಸಿತು. ಬಿಹಾರ ರಾಜ್ಯದ, ಔರಂಗಬಾದ್ ಜಿಲ್ಲೆಯ 'ಕೈಥಿಬಿಘಾ'ದ ಸಮೀಪ 'ಮುಖಾರ' ಎಂಬುದು ಒಂದು ಕುಗ್ರಾಮ. ಅಲ್ಲಿನ ಭೂಮಿಹಾರ್ ಜಾತಿ ಜಮೀನುದಾರನ ಮಗ ಶಿವ ಕುಮಾರ್ ಶರ್ಮಾ, ಕನಾಯಿಸಾಹು ಎನ್ನುವ ದಲಿತ ವ್ಯಕ್ತಿಯ ಸೊಸೆಯನ್ನು ಕೆಡಿಸಿದ. ಈ ಮೃಗೀಯ ವರ್ತನೆಯನ್ನು ಪ್ರತಿಭಟಿಸಲು 'ಕೈಥಿ ಬಿಘಾ' ಗ್ರಾಮದ ದಲಿತರು ತೀರ್ಮಾನಿಸಿದರು. ಅದರಂತೆ 30ಜನ ದಲಿತರು ಊರ ಹೊರಗಡೆ ಒಂದೆಡೆ ಸೇರಿದರು. ದಲಿತರು, ಭೂ ಮಾಲೀಕರಲ್ಲಿ ಕನಿಷ್ಠ ಕೂಲಿಗಾಗಿ 1981 ರಿಂದಲೂ ಒತ್ತಾಯ ಮಾಡುತ್ತಿದ್ದರು. ಇದು, ಅವರು ಹೀಗೆ ಒಂದೆಡೆ ಸೇರಿರುವುದು ಇದೇ ಮೊದಲಲ್ಲ ಎಂಬುದನ್ನು ತೋರಿಸುವುದು. ಆದರೆ ಈ ಬಾರಿಯ ಅವರ ಸಮಾಲೋಚನೆಗೆ ಮಹಿಳೆಯ ಅತ್ಯಾಚಾರದ ವಿರುದ್ಧ ಧ್ವನಿ ಎತ್ತುವ ಹೊಸ ವಿಚಾರ ಸೇರಿತ್ತು.

ಪ್ರತಿಭಟನಾ ಸಭೆಗೆ ಅನೇಕ ಅಡ್ಡಿಗಳನ್ನು ಭೂಮಾಲೀಕರು ಮಾಡಿದರು. ದಲಿತರ ದೃಢ ಮನಸ್ಸು ಎಲ್ಲಾ ಅಡಚಣೆಗಳನ್ನು ವಿಫಲಗೊಳಿಸಿತು. ಆಗ ಜಮೀನುದಾರರು ಕಾರ್ಯಸಿದ್ಧಿಗೆ ಓಬ್ರಾ ಪೋಲಿಸು ಠಾಣೆಯವರ ಮೊರೆ ಬಿದ್ದರು. ಜಮೀನುದಾರರ ಪರ ಬಂದ ಪೋಲೀಸರು ದಲಿತರ ಕೇರಿಯನ್ನು ಒಮ್ಮೆಗೆ ಸುತ್ತುವರೆದರು. ನಂತರ ಇಬ್ಬರು ಪೋಲೀಸ್ ಪೇದೆಗಳು ಒಂದು ಮನೆಯೊಳಗೆ ಅಕ್ರಮವಾಗಿ ಪ್ರವೇಶಿಸಿ, ಶೋಧನೆ ಪ್ರಾರಂಭಿಸಿದರು.

ಪೋಲೀಸರ ಈ ಕಾನೂನು ಬಾಹಿರ ಕೆಲಸವನ್ನು ಮಹಿಳೆಯರು ವಿರೋಧಿಸಿದರು. ತತ್ಪರಿಣಾಮ, ಪೋಲೀಸರ ಮತ್ತು ದಲಿತರ ನಡುವೆ ಕಿತ್ತಾಟ. ಹೊಂಚು ಹಾಕಿ ಅಲ್ಲೆ ಕುಳಿತಿದ್ದ ಭೂಮಾಲೀಕ ಮತ್ತು ಬಾಲಬಡಕರು ದಲಿತರ ಗುಡಿಸಲುಗಳಿಗೆ ಸೀಮೆಎಣ್ಣೆ ಚಿಮುಕಿಸಿ, ಬೆಂಕಿ ಇಟ್ಟರೆಂದು ಪ್ರತ್ಯಕ್ಷದರ್ಶಿಗಳ ಹೇಳಿಕೆ. ಜೀವಭಯದಲ್ಲೆ ದಲಿತರು ಗುಡಿಸಲುಗಳಿಂದ ಹೊರಗೋಡಿದರು. ಇವನ್ನೇ ಕಾಯುತ್ತಿದ್ದ ಪೋಲೀಸರು ಗುಂಡುಗಳನ್ನು ಸಿಡಿಸಿದರು. ಈ ಭೀಕರತೆಯ ಪರಿಣಾಮ ಐದು ಜನ ದಲಿತರು ಸ್ಥಳದಲ್ಲೇ ಮೃತಪಟ್ಟರು.

ಸತ್ತವರು ನಕ್ಸಲೈಟ್‌ಗಳು; ನಮ್ಮ ರಕ್ಷಣೆಗೆ ಹೀಗೆ ಗುಂಡುಗಳನ್ನು ಹಾರಿಸಿದೆವು ಎಂಬುದು

...ಲೀಸರ ಅಭಿಪ್ರಾಯ. ಸುಮಾರು 30 ಘಂಟೆ ...ಳ ಗುಂಡಿನ ಕಾಳಗದಲ್ಲಿ ಅವರು ಸತ್ತರು. ಈ ...ಳಗದಲ್ಲಿ ಇಬ್ಬರು ಪೋಲೀಸರು ಸತ್ತಿರುವರು. ಮತ್ತು ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟ್ ...ಎಸ್. ಪ್ರಸಾದ್ ಅವರು ಹೇಗೋ ಅಪಾಯ ...ದ ಪಾರಾದರು ಎಂದು ಓಬ್ರಾ ಪೋಲೀಸ್ ಠಾಣೆ ಸಬ್ ಇನ್ಸ್‌ಪೆಕ್ಟರ್ ಸಿ. ಡಿ. ಸಿಂಘ್ ಹೇಳಿಕೆ ನೀಡಿರುವರು. ಮಣ್ಣಿನ ಗುಡಿಸಲುಗಳು ಕೋಟೆಗಳಂತೆ ದಲಿತರಿಗೆ ರಕ್ಷಣೆ ನೀಡಿದವು. ಇದ ...ಂದ ಅವರು ಸಿಕ್ಕಾಪಟ್ಟೆ ಗುಂಡುಗಳನ್ನು ಸಿಡಿ ...ದರೆಂದೂ ಸಹ ಸಿಂಘ್ ಪ್ರತಿಕ್ರಿಯೆ. ಲೂಟಿ, ...ಕಾಯಿತಿ ಮತ್ತು ಶಸ್ತ್ರಾಸ್ತ್ರಗಳನ್ನು ಲಪಾಟಣೆ ...ರಿತು ಪೋಲೀಸರು ಈಗ ದಲಿತರ ಮೇಲೆ ಕೇಸು ...ಾಕಿರುವರು.

ದಲಿತರಿಂದ ಪೋಲೀಸರು 3 ರೈಫಲ್ ಗಳನ್ನು ವಶಪಡಿಸಿಕೊಂಡಿರುವರು. ಸತ್ತವರು 'ಉಗ್ರಗಾಮಿಗಳು' ಎನ್ನುವ ವಾದಕ್ಕೆ ಈ ಕಾರ್ಯ ಪುಷ್ಟಿ ನೀಡಿದೆ.

ಪೋಲೀಸರ ಈ ವಾದ ಆಧಾರ ರಹಿತವಾ ದುದು ಎಂಬುದಕ್ಕೆ ಅನೇಕ ಸತ್ಯ ವಿಚಾರಗಳು ಹೊರ ಬಿದ್ದಿವೆ. ಉಗ್ರಗಾಮಿಗಳೊಡನೆ ಗುಂಡಿನ ಕಾಳಗ ನಡೆದಿರುವುದು ಸ್ವಕಲ್ಪಿತ ವಿಚಾರ. ಪೋಲೀಸರೇ ಗುಡಿಸಲುಗಳನ್ನು ಸುಟ್ಟಿರುವುದು ಇದಕ್ಕೆ ಸಾಕ್ಷಿ. ನಕ್ಸಲೈಟ್‌ಗಳು ಗುಡಿಸಲುಗಳಲ್ಲಿ ಅವಿತು ಗುಂಡುಗಳನ್ನು ಹಾರಿಸಿರುವುದು ಅವಾಸ್ತ ವಿಕ. ಕಾರಣ; ಹಾಗೇನಾದರೂ ಆಗಿದ್ದರೆ, ಸೀಮೆ ಎಣ್ಣೆಯಿಂದ ತೋಯ್ದ ಗುಡಿಸಲುಗಳಿಗೆ ಪೋಲೀ ಸರು ಬೆಂಕಿ ಇಡುವ ಪ್ರಶ್ನೆ ಬರುತ್ತಿತ್ತೇ ? ಗುಡಿ ಸಲುಗಳು ಎಂದೆಂದೂ ಉಗ್ರಗಾಮಿಗಳಿಗೆ ಕೋಟೆ ಗಳಾಗಿರಲಿಲ್ಲ. ನಾಶವಾದ 30 ಗುಡಿಸಲುಗಳನ್ನು ಅತ್ಯಂತ ಸೂಕ್ಷ್ಮದಲ್ಲಿ ಪರಿಶೀಲಿಸಿದರೆ ಇದು ವ್ಯಕ್ತ ವಾಗುತ್ತದೆ.

ರಕ್ತಮಿಶ್ರಿತ ಸಮವಸ್ತ್ರಗಳನ್ನು ರಾಜ್ಯ ಪೋಲೀಸ್ ನಿರ್ದೇಶಕರ ಪರಿಶೀಲನೆಗೆ ಔರಂಗಬಾದ್ ಕಳುಹಿಸಿದೆ. ಆ ವಸ್ತ್ರಗಳನ್ನು ದಲಿತನೊಬ್ಬನ ಮನೆಯಿಂದ ವಶಪಡಿಸಿಕೊಳ್ಳಲಾಯಿತೆಂದು ಪೋಲಿ ಸರು ತಿಳಿಸಿರುವರು. ವಾಸ್ತವಿಕವಾಗಿ ನಿರ್ದೇಶಕರು ಇನ್ನೂ ಔರಂಗಬಾದಿಗೆ ಬಂದಿಲ್ಲ. ಅಲ್ಲದೆ ಸಮ ವಸ್ತ್ರಗಳನ್ನು ಓಬ್ರಾ ಪೋಲೀಸರು ಧರಿಸುತ್ತಿರು ವರು. ಹಾಗೂ ಕೊಲೆಯಾದ ದಲಿತರು ಕ್ರಿಮಿ ನಲ್‌ಗಳು ಎನ್ನಲು ಯಾವುದೇ ದಾಖಲೆಗಳೂ ಲಭ್ಯವಿಲ್ಲ.

ದಲಿತರ ದಮನಕ್ಕೆ ಪೋಲೀಸರು ಮತ್ತು ಭೂ ಮಾಲೀಕರ ಮಧ್ಯೆ ಒಳಸಂಚು ನಡೆಯುತ್ತಿದೆ. ಶಿವಕುಮಾರ ಶರ್ಮಾ ದಲಿತ ಮಹಿಳೆಯನ್ನು ಅತ್ಯಾಚಾರ ಮಾಡಿದ, ಅತ್ಯಾಚಾರವನ್ನು ವಿರೋ ಧಿಸಲು ಮಹಿಳೆಯ ಮಾವ ಕನ್ಹಾಯಿಸಾಹು ದಲಿ ತರ ಸಭೆಯನ್ನು ವ್ಯವಸ್ಥೆ ಮಾಡಿದ. ಕನ್ಹಾಯಿಸಾಹು, ಜಮೀನುದಾರ ಚೋಟ ನಾರಾಯಣ ಶರ್ಮಾನ ಜೀತದಾಳು. ದಲಿತರ ಸಮಾಲೋಚನ ಸಭೆ ನಡೆ ಯನಂತೆ ಮಾಡಲು ಚೋಟ ನಾರಾಯಣಶರ್ಮಾ ಕನ್ಹಾಯಿ ಸಾಹು ಮತ್ತು ಕುಟುಂಬದವರನ್ನು ಗೃಹಬಂಧನದಲ್ಲಿಟ್ಟನು. ಆದರೆ ದಲಿತರು ಇದಕ್ಕೆ ಬಗ್ಗಲಿಲ್ಲ. ಗಾಬರಿಗೊಂಡ ಜಮೀನುದಾರರು ಪೋಲೀಸರ ಸಹಕಾರ ಬೇಡಿದರು.

ಅರವಿಂದ ಶರ್ಮಾ ಮತ್ತೊಬ್ಬ ಜಮೀನು ದಾರನ ಮಗ. ಇವನು ಪಕ್ಕದ ಗ್ರಾಮದ ನಂಕು ರಾಂ ಎನ್ನುವವನ ಮಗಳನ್ನು ಅತ್ಯಾಚಾರ ಮಾಡಿದ್ದು ಮತ್ತು ಭೂಮಾಲೀಕರು ಅಧಿಕೃತ ಕನಿಷ್ಠ ವೇತನ ಕೊಡದಿರುವ ವಿಷಯಗಳನ್ನು ದಲಿ ತರು ಸಭೆಯಲ್ಲಿ ಚರ್ಚಿಸಿದರು. ಸಭೆಯ ದಿನ ದಲಿ ತರು ಆಹಾರವನ್ನು ಮುಟ್ಟದಷ್ಟು ಕ್ಷೋಭೆಗೊಂಡಿ ದ್ದರು. ಸತ್ತದೇಹಗಳಲ್ಲಿ ಆಹಾರದ ತುಣುಕು ಗಳು ಇರದಿದ್ದನ್ನು ಹಾಗೂ ಸತ್ತವರು ನಕ್ಸಲೈಟ್ ಗಳಾಗಿರದೆ, ಕೇವಲ ಅನ್ಯಾಯವನ್ನು ಪ್ರತಿಭಟಿಸಿದ ಮಾಮೂಲಿ ದಲಿತರು ಎಂಬ ಅಂಶಗಳನ್ನು ಮರ ಣೋತ್ತರ ಪರೀಕ್ಷೆ ಸ್ಪಷ್ಟ ಪಡಿಸಿದೆ.

ದಲಿತರ ಬದುಕಿಗೆ ಭೂಮಿಹಾರರ ಹೊಲ ಗದ್ದೆಗಳೇ ಗತಿ. ಜೀತ ಮತ್ತು ದಿನಗೂಲಿ ಅವರ ಸಾಮಾನ್ಯ ಉದ್ಯೋಗ. ಈ ಹಿನ್ನೆಲೆಯಲ್ಲಿ ಅವರು ನಿರಂತರ ಹಲ್ಲೆ, ದೌರ್ಜನ್ಯಗಳಿಗೆ ಒಳಗಾಗಿರುವರು. ಅಧಿಕೃತ ಕನಿಷ್ಠ ವೇತನವನ್ನು ಬೇಡಿದ ಕಾರಣಕ್ಕೆ 1981ರಲ್ಲಿ 'ಕೈಥಿಬಿಘಾ'ದ ಪಕ್ಕದ 'ಗೈನಿಗ್ರಾಮ ದಲ್ಲಿ 6 ಜನ ದಲಿತರು ಕೊಲೆಯಾದರು. ಜಮೀನು ದಾರರ ದೌರ್ಜನ್ಯಗಳ ಮಧ್ಯೆಯೇ ದಲಿತರು ಭಾರ ತೀಯ ಪ್ರಜಾವೇದಿಕೆ ಸಂಘಕ್ಕೆ ಸೇರುತ್ತಿರುವರು. 1982ರಲ್ಲಿ ಹುಟ್ಟಿದ ಈ ವೇದಿಕೆ ಅನ್ಯಾಯ, ದಬ್ಬಾ ಳಿಕೆಗಳನ್ನು ಪ್ರತಿರೋಧಿಸುವ ನೈತಿಕ ಧೈರ್ಯವನ್ನು ದಲಿತರಲ್ಲಿ ಮೂಡಿಸುತ್ತಿದೆ.

ಕೈಥಿಬಿಘಾ ಗ್ರಾಮದವರು ಒತ್ತಾಯಮಾಡಿ ತಮ್ಮ 2 ರೂಪಾಯಿ ಕೂಲಿಯನ್ನು 6 ರೂಪಾ ಯಿಗೆ ಹೆಚ್ಚಿಸಿಕೊಂಡರು. ಅಧಿಕೃತ ಕನಿಷ್ಠ ವೇತನ 8 ರೂಪಾಯಿ ಇನ್ನೂ ಕನಸಾಗಿದೆ. ಕೂಲಿ ಹೆಚ್ಚಾದ ಮೇಲೆ, ದಲಿತರ ಮತ್ತು ಭೂಮಾಲೀಕರ ನಡು ವಿನ ಸಂಬಂಧ ಅಧಿಕವಾಗಿ ಕ್ಷೀಣಿಸಿತು. ದಲಿತ ರನ್ನು ಗ್ರಾಮದಿಂದ ಒಕ್ಕಲೆಬ್ಬಿಸಲು ಸರ್ವ ಪ್ರಯತ್ನ ನಡೆಯುತ್ತಿದೆ. ಭೂ ಮಾಲೀಕ ಪರಶು ರಾಂ ಶರ್ಮಾ ಈ ಕಗ್ಗೊಲೆಯ 'ಕಾಣದ ಕೈ' ಎಂದು ತಿಳಿದಿದೆ. ಇವನು ಅಲ್ಲಿನ ಶಾಲೆಯ ಉಪಾಧ್ಯಾಯ. ದಲಿತರು ವಾಸಿಸುತ್ತಿರುವ ಜಾಗ ಶಾಲೆಗೆ ಸೇರಿರುವುದೆಂದು ಈ ನರಭಕ್ಷಕನ ಮೊಂಡು ವಾದ. ರೆವಿನ್ಯೂ ದಾಖಲೆಗಳ ಪ್ರಕಾರ ಈ ಭೂಮಿ ಶಾಲೆಗೆ ಸೇರಿಲ್ಲ. ವಾಸ್ತವಿಕವಾಗಿ, ಅದು 20 ಅಂಶಗಳ ಅಡಿಯಲ್ಲಿ ದಲಿತರಿಗೆ ಲಭಿಸಿದೆ.

ಭಿನ್ನ ಭಿನ್ನ ರಾಜಕೀಯ ನಿಷ್ಠೆಯೂ ಭೂ ಮಾಲೀಕರ ಮತ್ತು ದಲಿತರ ಮಧ್ಯದ ಬಿಕ್ಕಟ್ಟಿಗೆ ಮತ್ತೊಂದು ಹಿನ್ನೆಲೆ : ಜಮೀನುದಾರರು ಕಾಂಗ್ರೆ ಪಕ್ಷವನ್ನು ಬೆಂಬಲಿಸಿದರೆ ದಲಿತರು ಜನತಾ ಕಮ್ಯುನಿಷ್ಟ್ ಪಕ್ಷವನ್ನು ಬೆಂಬಲಿಸಿದರು.

ಕೈಥಿ ಬಿಘಾ ಮತ್ತು ಸುತ್ತಲಿನ ಗ್ರಾಮಗಳ ಬಿಸಿ ವಾತಾವರಣ ಇನ್ನೂ ಸುತ್ತಿಲ್ಲ. ಈ ಪ್ರದೇಶದ ರಕ್ಷಣೆಯಲ್ಲಿರುವ ಪೋಲೀಸರು ಜಮೀನುದಾರರ 'ಅತಿಥಿಗಳು'. ದಲಿತರು ಗ್ರಾಮವನ್ನು ತೊರೆದಿರು ವರು. ಅವರು ಗ್ರಾಮಕ್ಕೆ ವಾಪಸಾಗಲು ಜಿಲ್ಲೆಯ ಆಡಳಿತ ಯಂತ್ರ ಪ್ರಯತ್ನ ಪಡುತ್ತಿದೆ. ಇದಕ್ಕಾಗಿ ಗ್ರಾಮದ ಮುಖ್ಯಸ್ಥ ರಾಮುಬಾರನ್ ಸಿಂಘ್‌ನ್ನು ಭೇಟಿ ಮಾಡಿದೆ. ಆದರೆ ನೂರು ಜನ ಅಥವಾ ಬದುಕುಳಿದ ದಲಿತರು ಹಳ್ಳಿಗೆ ಇನ್ನೂ ಹಿಂತಿರು ಗಿಲ್ಲ.

ಕಾರ್ಯ ನಿರ್ವಾಹಕ ಮ್ಯಾಜಿಸ್ಟ್ರೇಟ್ ಶ್ರೀ ಎ. ಬಿ. ಸಿಂಘರು ಜನವರಿ 3 ರಂದು ಗ್ರಾಮದ ವಾತಾವರಣವನ್ನು ಪರೀಕ್ಷಿಸಿದರು. ಪರಿಹಾರ ಮತ್ತು ಪುನರ್ವಸತಿ ಕಾರ್ಯಗಳನ್ನು ಶೀಘ್ರವೇ ಕೈಗೊಳ್ಳುವುದರ ಬಗ್ಗೆ ಹಾಗೂ ಮುಂದೆಂದೂ ಇಂಥ ಹಿಂಸೆ ಇಲ್ಲಿ ಜರುಗದಂತೆ ನೋಡಿಕೊಳ್ಳಲಾ ಗುವುದೆಂಬ ಭರವಸೆಯನ್ನು ಮ್ಯಾಜಿಸ್ಟ್ರೇಟರು ನೀಡಿರುವರು.

ಗುಡಿಸಲುಗಳನ್ನು ಪೋಲೀಸರು ಸುಟ್ಟರು ಎಂಬ ಸತ್ಯಸಂಗತಿಯನ್ನು ಒಪ್ಪಿಕೊಳ್ಳಲು ಸರ್ಕಾರ ಸಿದ್ಧವಿಲ್ಲ. ಗುಂಪಾಗಿದ್ದ ಮನೆಗಳು ಕೋಟೆ ಯೋಪಾದಿಯಲ್ಲಿದ್ದು, ತಪ್ಪಿಸಿಕೊಳ್ಳಲು ಸುರಂಗ ಮಾರ್ಗವನ್ನು ಹೊಂದಿದ್ದವು ಎಂಬುದೇ ಸರ್ಕಾ ರದ ಬಲವಾದ ನಂಬಿಕೆ.

ಸರ್ಕಾರದ ಈ ಬಗೆಯ ತಾತ್ಸಾರ ಮನೋ ಭಾವನೆಯನ್ನು ಅರಿತ ಅಕ್ಕಪಕ್ಕದ ಪ್ರದೇಶಗಳ ದಲಿತರು ವಲಸೆಹೋಗಲು ಯೋಚಿಸುತ್ತಿರುವರು. ಅಲ್ಲಿಯೇ ಬದುಕುಳಿಯಲು ಇಚ್ಛಿಸದ ದಲಿತರು ಭಯಭೀತಿಯಲ್ಲಿ ನರಳುತ್ತಿರುವರು.

(ಆಧಾರ—'ಸಂಡೆ')

# " ಅತ್ತ ಕಾಂಗ್ರೆಸ್‌ನೂ ಬಿಡಕ್ಕಾಗಲ್ಲ ಇತ್ತ ಸಂಘನೂ... "

[illegible] ರಾಮಣ್ಣ ನನ್ನೊಡನೆ ಮಾತಾಡುತ್ತಾ : "ನನ್ನ ಕತ್ತ ಕೂಯ್ದು ಅತ್ತಗ [illegible] ನಾನು ಹಸ್ತದ ಗುರುತಿಗೇ [illegible]"—ಎಂಬಂಥ ತನ್ನ ನಿಲುವನ್ನು ಬಹಿ[illegible]. ನಾನು ಆ ಮಾತಿಗೆ ತಕ್ಷಣ [illegible]. [illegible] ನಾಲಗೆ ಅಲ್ಲಾಡಲಿಲ್ಲ. [illegible] ನನ್ನತ್ತ [illegible] ಮಾಡಿ : "ಇವರೇ ಓಟಿಗೆ ನಿಲ್ತಾರಪ್ಪ ಆಗ" "ಅನ್ನಲಾಗಿ ರಾಮಣ್ಣನ ಒಳಗಲಿಂದ ತಳಮಳ ಎಂಬುದು ಹುಟ್ಟಿತು. ಆತ ನನ್ನತ್ತ ನೋಟ ನಟ್ಟು, ತುಂಬಾವೇ ಕರಗಿದವನಾಗಿ: ಇವರ ಇರುದ್ದ ಆ ಸತ್ತಿರಾ ನಮ್ಮವ್ವ ಇಂದಿರಾ ಗಾಂಧಿಯು ನಿಂತ್ರೂವಿ ನಾನು ಇವರಿಗೇ ವೋಟ್ಹಾಕ್ತೀನಿ" ಅಂದು ತುಂಬಾ ಗಲಿಬಿಲಿಗೊಂಡವನಾದನು.

ಇಂದಿರಾ ಪರ ವೋಟುಗಳ ಒತ್ತೆಯಿಟ್ಟವರಾದ ಕರ್ನಾಟಕದ ದಲಿತರು ಕೊಂಚ ವಿಚಲಿತರಾದರು. ನೋವುಗಳ ನಡುವೆ ಅವರ ದನಿಗೆ ಸಂಘಟಿತ ಚೇತನ ತುಂಬಿದ ದಲಿತ ಸಂಘ ಒಂದು ಕಡೆ. ಅವರು ತಮ್ಮದು ಅಂದುಕೊಂಡ ಕಾಂಗ್ರೆ ಮತ್ತೊಂದು ಕಡೆ. ಅವರದು ಎತ್ತಲೂ ಹೋಗದ ಸ್ಥಿತಿ. ಅವರು ಕಾಂಗ್ರೆ ನಂಬಿದವರಾಗಿದ್ದರು. ಅವರಿಗೆ ಇಂದಿರಾಗಾಂಧಿಯೂ, ಮಹಾತ್ಮಗಾಂಧಿಯೂ ಒಂದೇ ಆಗಿದ್ದರು. ಕಾಂಗ್ರೆಸ ಕರಾಳ ಮುಖಗಳ ಅರಿಯದವರಾದ ಅವರು; ದಲಿತ ಸಂಘದಿಂದ ದೂರಸರಿಯಲಾರದವರಾಗಿದ್ದರು. ವೋಟುಗಳಬಹಿಷ್ಕರಿಸುವುದು ಸುಲಭವೂ ಸರಳವೂ ಆಗಿತ್ತು. ಆದರೆ ಕಾಂಗ್ರೆ ಹೊರತು ಬೇರಾವುದೇ ಪಕ್ಷಕ್ಕೆ ವೋಟಾಕುವುದು ಅವರ ದೃಷ್ಟಿಯಲ್ಲಿ ಕ್ರೂರ ಅಪರಾಧವಾಗಿತ್ತು.

ದಲಿತರ ಸಾವು ನೋವುಗಳ ನಡುವೆ ನಮ್ಮ ಬದುಕನ್ನು ಹಂಚಿಕೊಂಡವರಾದ ನಾವು ಜನತಾ ಬೆಂಬಲಿಸಿದಾಗ ನಮ್ಮ ಕಣ್ಣೆದುರೇ ಚಿಗುರೊಡೆದ ರೈತ ಸಂಘದ ದುರಂತವು ಚರಿತ್ರೆಯ ಗರ್ಭ ಸೇರಿತ್ತು. ಜನತಾ ಸೋಲು ನಮ್ಮ ಸೋಲೂ ಆಗಲೆಂದೇ ಬೆಂಬಲಿಸಿದೆವು. ಮತ್ತೊಮ್ಮೆ ಕಾಂಗ್ರೆ ಪಕ್ಷವ ಬೆಂಬಲಿಸಲು ಇಂದಿರಾಗಾಂಧಿಯವರ ಹೆಣ ಇರಲಿಲ್ಲವಾಗಿ ನಾವು ಬಚಾವಾದೆವು.

ಮೈಸೂರಲ್ಲಿ ಸಿದ್ಧರಾಮಯ್ಯರ ಪರ ಪ್ರಚಾರಕ್ಕೆ ಹೊರಟ ದಲಿತ ಸಂಘದ ಕಾರ್ಯಕರ್ತರು, ಬಡವರ ಕೈಲಿ ಹೊಡೆತ ತಿಂದೂ ಎದೆಗೆಡದೆ ಪ್ರಚಾರ ಮಾಡಿದರು. ಹುಣಸೂರಲ್ಲಿ ಆರೋಗ್ಯಮಂತ್ರಿ ಡಾ॥ ಹೆಚ್. ಎಲ್. ತಿಮ್ಮೆಗೌಡರ ಪರ ದಲಿತ ಸಂಘವು ಜನತಾ ಪಕ್ಷವ ಬೆಂಬಲಿಸಿತು. ಹಿಂದೊಮ್ಮೆ ನಾವು ಡಾ॥ ಗೌಡರನ್ನು ಘೇರಾವೋ ಮಾಡಿ, ಧಿಕ್ಕಾರ ಕೂಗಿದ್ದೆವು. ರಾಜ್ಯಸಮಿತಿಯ ನಿಲುವನ್ನು ಗೌರವಿಸಿ, ಹಳೆಯ ವೈಷಮ್ಯಗಳ ಮರೆತು ನಮ್ಮ ನಮ್ಮ ಪಾಲಿನ ಕೆಲಸ ಮಾಡಿದೆವು. ಆದರಿಂದಾಗಿ ನಮ್ಮ ವೈರಿಗಳೆಂದು ಕೊಂಡವರು ಕೂಡಾ ಕರಗಿದರು. ಅರಸುಪುತ್ರಿಯ ಸುಭದ್ರಕೋಟೆ ಮುರಿದು ಬಿತ್ತು.

ಶಿವಮೊಗ್ಗದಲ್ಲಿ BJP ಗಳ ಅಬ್ಬರ ಜಾಸ್ತಿಯಿತ್ತು. ಕೆಲವು ಕಡೆ ದಲಿತ ಸಂಘದ ಕಾರ್ಯಕರ್ತರ ಜತೆ ಮುಖಾಮುಖಿ ಕಾದಾಟಕ್ಕೆ ಅಣಿಯಾದ BJPಗಳು ಕಾಂಗ್ರೆ ಜತೆ ಕೂಡಾವಳಿ ಮಾಡಿಕೊಂಡು ತಟಸ್ಥರಾದರು. ಚುನಾವಣಾ ಪ್ರಚಾರಕ್ಕಾಗಿ ಇಲ್ಲಿನ ದಲಿತ ಸಂಘವು ಜನರಿಂದ ಹಣ ಸಂಗ್ರಹಿಸಿತು. ಪ್ರಾರಂಭದಲ್ಲಿ ಊರೂರಿಗೆ ಹೋಗಲು ಸೈಕಲ್ ಬಳಸಬೇಕೆಂಬ ತೀರ್ಮಾನದಂತೆ ನಡೆಯಲು ಕಷ್ಟವಾದಾಗ ಜನತಾ ಸಿಂಪತೈಸರ್‌ಗಳು ನೀಡಿದ ಮೆಟಡಾರಿನಲ್ಲಿ ಪ್ರಚಾರ ಕಾರ್ಯವು ಸುಗಮವಾಗಿ ನಡೆಯಿತು. ಚೆನ್ನಗಿರಿಯಲ್ಲಿ ಜೆ. ಎಚ್. ಪಟೇಲರಂಥವರೂ ಗೆಲ್ಲುವುದು ತುಂಬಾ ಕಠಿಣವಾದರೂ ಗೆದ್ದರು.

## ಕಳೆದ ಚುನಾವಣೆಯಲ್ಲಿ ದಲಿತರ ತಳಮಳ

ಹಾಸನದ ಎಲ್ಲಾ ಸೀಟುಗಳೂ ಜನತಾ ಪರ ಗೆದ್ದವು. ಹೊಳೆನರಸೀಪುರ ಬಿಟ್ಟರೆ ಮಿಕ್ಕ ಎಲ್ಲ 7 ಕ್ಷೇತ್ರಗಳಲ್ಲಿ ದಲಿತ ಸಂಘದ ಗೆಳೆಯರು ತೀವ್ರವಾಗಿ ದುಡಿದರು. ಕಾಂಗ್ರೆ ಮೂಲಗುಂಪಾಯಿತು.

ಚಿಕ್ಕಮಗಳೂರು, ಮೈಸೂರು, ಮಂಡ್ಯ, ಬೆಂಗಳೂರು, ಕೋಲಾರ ಮುಂತಾದ ಎಲ್ಲಾ ಜಿಲ್ಲೆಗಳಲ್ಲೂ ದಲಿತ ಸಂಘವು ಸಕ್ರಿಯವಾಗಿ ಕೆಲಸ ಮಾಡಿದ ಪ್ರತಿಯೊಂದು ಕ್ಷೇತ್ರದಲ್ಲಿ ಜನತಾವು ಗೆಲ್ಲಲು ಸಾಧ್ಯವಾಯಿತು.

ಅನೇಕ ಜನತಾ ಶಾಸಕರು ದಲಿತರು ತಮಗೆ ಓಟು ಹಾಕಿಲ್ಲವೆಂದು ತಿಳಿದಿದ್ದರೆ ಅದು ತಪ್ಪು. ಮನಸ್ಸಿಲ್ಲದ ಮನಸ್ಸಿನಿಂದಲಾದರು ದಲಿತರು ಮತ ಹಾಕದಿದ್ದರೆ ಜನತಾ ಇಂಡಿಯಾದ ರಾಜಕೀಯ ನಕ್ಷೆಯಲ್ಲಿ ಅಳಿಸಿಹೋಗುತ್ತಿತ್ತು.

ಕೊನೆಯಲ್ಲಿ ಶಿವಮೊಗ್ಗ ಜಿಲ್ಲೆಯ ತಾರೀಕಟ್ಟೆಯ ಒಂದು ಸಂಗತಿಯ ಪ್ರಸ್ತಾಪಿಸುವೆ. ಅದು ಬಿ. ಕೃಷ್ಣಪ್ಪನವರು ಹೇಳಿದ್ದು.

ಇಡೀ ಜಿಲ್ಲೆಯ ತುಂಬ ದಲಿತ ಸಂಘವು ಬಿರುಸಿನ ಪ್ರಚಾರ ನಡೆಸಿತ್ತು. ಎರಡುರೂಪಾಯಿಗೆ ಒಂದು ಕೆ. ಜಿ. ಅಕ್ಕಿ ಬೇಕಾದ್ರೆ ಜನತಾಕ್ಕೆ ಓಟಾಕಿರಿ ಎಂದೇ ನೇರ ಪ್ರಚಾರ ನಡೆದಿತ್ತು. ತಾರೀಕಟ್ಟೆ ಗ್ರಾಮದ ಮುದುಕಿ ಮತಗಟ್ಟೆಗೆ ಹೋಗುವಾಗ ಗೋಳೋ ಎಂದು ಅಳುತ್ತಾ ಹೋದಳು. ಏನಪ್ಪಾ ಮಾಡೋದು ನಾವು ಹುಟ್ಟಿದ ಕಾಲದಿಂದಲು ಕಾಂಗ್ರೆಸ್ ನಮ್ದಾಗಿತ್ತು. ಆ ಕಾಂಗ್ರೆಸ್‌ನೂ ಬಿಡಕಾಗಲ್ಲ. ಈ ಕಡೆ ಸಂಘ ನಮ್ಮ ಕಷ್ಟ ಸುಖಗಳಿಗೆ ಓಡಿಬರುತ್ತದೆ. ಸಂಘನೂ ಬಿಡಕಾಗಲ್ಲ. ಆದದ್ದಾಗಲಿ ಸಂಘವೇ ಬೇಕು" ಎಂದು ಕಣ್ಣೀರು ಹಾಕುತ್ತಾ ಮುದುಕಿ ಜನತಾಕ್ಕೆ ಮತ ಒತ್ತಿದಳು.

ಇಂಥಾ ಸಾವಿರಾರು ಮನಸ್ಸುಗಳ ಪರಿವರ್ತನೆಯ ಫಲವಾಗಿ ಇಂದು ಜನತಾ ಜನ್ಮತಾಳಿದೆ. ಮೇಲಿನ ಮುದುಕಿಯ ಕಣ್ಣೀರಿನ ಬೆಲೆ ಎಲ್ಲ ಗೆದ್ದವರಿಗೂ ತಿಳಿಯುತ್ತದೆಂದು ನಾನು ನಂಬುವೆ.

—ಮು. ನಾ.

## ಪಂಚಮ ಬಳಗ

(ಕಳೆದ ಸಂಚಿಕೆಯಿಂದ ಮುಂದುವರಿದುದು)

32 ಪಿ ಸುಂಬಯ್ಯ, ಮಡಿಕೇರಿ
33 ಇ. ರ. ದುರ್ಗಾಪ್ರಸಾದ್, ವಿರಾಜಪೇಟೆ
34 ಬಿ. ಎಸ್. ವಾಸುದೇವ, ಉಡುಪಿ
35 ಆರ್. ರಂಗಸ್ವಾಮಿ, ಶಿರಾ
36 ವಿ. ರಂಗಸ್ವಾಮಿ, ಚೇಳೂರು ನಗರ
37 ಎಸ್. ಕುಮಾರ ಸ್ವಾಮಿ, ಮಾಸ್ತಿಕಟ್ಟೆ
38 ಬಿ. ಶಾಂತವೀರಪ್ಪ, ಮೈಸೂರು
39 ಚೌಡೇಶ್ವರಿ ವೀವರ್ಸ್ ಸಂಘ, ಮೈಸೂರು
40 ಡಿ. ದೇವಣ್ಣ, ಮೈಸೂರು
41 ಬಿ. ರುದ್ರಮೂರ್ತಿ, ಮೈಸೂರು
42 ಬಿ. ಸಿ. ತ್ರಿವೇದಿ, ಮೈಸೂರು
43 ಎಂ. ಸಿ. ನಟರಾಜ್, ತರೀಕೆರೆ
44 ಹೆಚ್. ಎಂ. ರುದ್ರಸ್ವಾಮಿ, ಹಾಸನ
45 ಕೆ. ಎಸ್. ನಾಗರಾಜ್, ಮೈಸೂರು
45 ಡಾ॥ ಎಸ್. ಶಿವಣ್ಣ

# ಸೋಲಿನಿಂದ ಸೋಲಿಗೆ ಚಲಿಸುವ ಮಹಾ ಚೇತನ ಡಾ॥ ಬಿಳಿಗಿರಿರಂಗಯ್ಯ

ಅವು ಶಿಶಿರ ಋತುವಿನ ಕೊನೆಯ ದಿನಗಳು. ಕೊಂಚ ಬಡಕಲಾದ ನದಿ ಇನ್ನೂ ತನ್ನ ಲಾವಣ್ಯವನ್ನು ಕಳೆದುಕೊಂಡಿರಲಿಲ್ಲ. ನದಿ ದಂಡೆಯ ಮೇಲಿನ ಹಳತಾದ ಐ. ಬಿ. ನಾನವರ ಕಂಡೆ. ತುಂಬ ದೊಡ್ಡದಾದ ಹಳೆಯ ಬೆತ್ತದ ಕುರ್ಚಿಯೊಂದರ ಮೇಲೆ ಆತ ವಿರಮಿಸಿದ್ದರು. ಒಂದು ಬಗೆಯ ಕಬ್ಬಲಿತನ ಅವರ ಆವರಿಸಿತ್ತು. ಆಳವಾದ ಏಕಾಂಗಿತನದಿಂದ ತುಂಬಿದ ಆ ವೃದ್ಧ ನನ್ನ ತಂದೆಯವರ ಸ್ನೇಹಿತರು. ನನ್ನಿಂದ ತೀವ್ರ ಪ್ರತಿಭಟನೆ ಎದುರಿಸಿದವರು. ನಾನವರ ಪ್ರತಿಷ್ಠೆಯ ಕೋಟೆಯನ್ನ ಹಾಳುಗೆಡವಿದ್ದೆ. ಅವರ ಘನತೆಗೆ ಕಳಂಕ ತಂದಿದ್ದೆ.

ನನ್ನ ದಾಳಿಗೆ ಅವರು ತಲ್ಲಣಿಸಿದ್ದರು. ಹೈಕೋರ್ಟಿನಲ್ಲಿ ನನ್ನ ವಿರುದ್ಧ ಮಾನನಷ್ಟದಾವೆ ಹಾಕುವುದಾಗಿ ಹೆದರಿಸಿದ್ದರು. ನಾನು ಯಾವುದಕ್ಕೂ ಸೊಪ್ಪು ಹಾಕಿರಲಿಲ್ಲ. ಕೊನೆಗೂ ವಿವಾದ ಬಗೆ ಹರಿದಿರಲಿಲ್ಲ. ಆತ ಬಾನೆತ್ತರ ಬೆಳೆದ ಉದುರಿದೆಲೆಗಳ ಮರದಂತೆ. ಷೇಕ್ಸ್‌ಪಿಯರನ ದುರಂತ ನಾಯಕನಂತೆ;ಮುಗಿಯದ ನೋವಿನ ಆಕಾಶದಂತೆ; ಪತಾಶಗೊಂಡ ಪುರಾತನ ಚೇತನದಂತೆ ಕಂಡರು. ಆತ ಕವಿಯಲ್ಲ, ಆದರೆ ಕವಿಯ ಮನಸ್ಸಿನ ಭಾವುಕ ನಂಬಿಕಸ್ತ.

ಆತ ಮತ್ತಾರು ಅಲ್ಲ ಡಾ॥ ಎನ್. ಸಿ. ಬಿಳಿಗಿರಿರಂಗಯ್ಯನವರು. ಒಂದು ರೀತಿಯಲ್ಲಿ ಅವರು ಪತನಗೊಂಡ ದಲಿತ ಪ್ರತಿಭೆ. ನಾಯಕತ್ವದ ಎಲ್ಲ ಗುಣಗಳಿದ್ದೂ ನಾಯಕತ್ವದಿಂದ ವಂಚಿತರಾದ ಅವರು ಜೀವನ ಪೂರಾ ಸೋಲಿನಿಂದ ಸೋಲಿಗೆ ಚಲಿಸಿದವರು.

ಈ ಚಲಿಸುವ ಸೋಲಿನ ಜತೆ ನಾನು ಮಾತುಕತೆಯ ಸಂದರ್ಭದಲ್ಲಿ ಗೆಳೆಯ ಹೊರಳವಾಡಿ ನಂಜುಂಡಸ್ವಾಮಿ ನನ್ನ ಜತೆಗಿದ್ದರು. ನಾವು ಡಾಕ್ಟರ್ ಸಾಹೇಬರ ರೂಮಿಗೆ ಹೊಕ್ಕಾಗ ಅವರು ಚಿಂತೆಯ ಚಿಲುಮೆಯಾಗಿದ್ದರು.

ನನ್ನ ಪರಿಚಯ ಹೇಳಿಕೊಂಡಾಗ ಅವರು ಮೌನವಾಗಿ ಸ್ಫೋಟಿಸಿದರು. ಮಾತುಗಳಿಗಾಗಿ ತಡಕಾಡಿದರು. ಒಂದೆರಡು ನಿ ಮಿ ಷ ಗ ಳ ನಂತರ ಪ್ರಮೇಣ ಚೇತರಿಸಿಕೊಂಡು ಊಟ ಮಾಡಲು ಹೇಳಿದರು. ನಾನವರನ್ನು ಪ್ರಶ್ನಿಸಲಿಲ್ಲ. ಅವರಾಗಿ ಮಾತಾಡಿದರು.

"ನಾನು ಕೊಲೆಗಾರನಾ ? ವೆಂಕಟನಾರಾಯಣನ ನಾನೇ ಕೊಲೆ ಮಾಡಿರೋದು ಎಂಬಂತೆ ಪಂಚಮದಲ್ಲಿ ಬರೆದಿದ್ದೀರಿ"

ನಾನವರಿಂದ ಈ ಪ್ರಶ್ನೆ ನಿರೀಕ್ಷಿಸಿರಲಿಲ್ಲ. ಕೊಂಚ ಅಪ್ರತಿಭನಾದೆ. ಆದರೂ ಉತ್ತರಿಸಿದೆ.

"ನಾನು ನಂಬಿದ ಆ ಸಂಗತಿ ಅಗಲೂ ಸತ್ಯ, ಈಗಲೂ ಸತ್ಯ. ಸತ್ಯವಲ್ಲದನ್ನು ನಾನು ಬರೆಯಲ್ಲ"

"ಅಂದ್ರೆ ನಾನು ಕೊಲೆಗಾರ !" ಆ ದೈತ್ಯಾಕೃತಿ ಕೊಂಚ ಅಲ್ಲೋಲ ಕಲ್ಲೋಲಗೊಂಡಿತು.

"ಹೋಗಲಿ ಸತ್ಯ ತಿಳ್ಕೊಂಡ್ರಾ ?"

ನಾನು ಉತ್ತರಿಸುವಗೊಡವೆಗೆಹೋಗಲಿಲ್ಲ. ಒಂದೇ ಉತ್ತರವನ್ನು ಮತ್ತೆ ಮತ್ತೆ ಹೇಳಬೇಕಾದ ಅಗತ್ಯವಿರಲಿಲ್ಲ.

## ವ್ಯಕ್ತಿ ಚಿತ್ರ

ಮುಳ್ಳೂರು ನಾಗರಾಜ್

"ಏನು ಓದಿದ್ದೀರಿ ?" ಆತ ಪ್ರಶ್ನಿಸಿದರು. ರಾಮಾಯಣ ಮಹಾಭಾರತ ಓದಿರುವೆ. ಆತ ಕಂಗಲಾದರು.

"ಅಷ್ಟೇನಾ ಇನ್ನೇನು ಓದಿದ್ದೀರಿ ?"

ಅನೇಕ ಕನ್ನಡ ಪುಸ್ತಕಗಳ ಹೆಸರು ಹೇಳಿದೆ, ಆತ ಅದಾವುದನ್ನೂ ಓದಿರಲಿಲ್ಲ.

"ನೆಪೋಲಿಯನ್ ಬೋನಾಪಾರ್ಟೆ ಹೆಸರು ಕೇಳಿದ್ದೀರಾ ?"

ಹೌದು ಕೇಳಿರುವೆ. ವಿವರವಾದ ಚರಿತ್ರೆಯ ಮಾಹಿತಿಗಳು ನನ್ನ ನೆನಪಿನಲ್ಲಿ ಉಳಿದಿಲ್ಲ"

"ನಿಮ್ಮಪ್ಪನಿಗೆ ಅಕ್ಷರ ಕ ಲಿ ಸಿ ದ ವ ರು ಯಾರ ಗೊತ್ತಾ ?"

ಪ್ರತಿಯೊಬ್ಬನಿಗೂ ಯಾವನೋ ಇನ್ನೊಬ್ಬನು ಅಕ್ಷರ ಕಲಿಸುತ್ತಾನೆಂಬ ಸಾಮಾನ್ಯ ತಿಳಿವಳಿಕೆಯಿಲ್ಲದೆ ಅವರು ಆ ಮಾತಾಡಿದ್ದರು. ನಾನು ಕೊಂಚವೂ ವಿಚಲಿತಗೊಳ್ಳದೆ "ನನಗೆ ಗೊತ್ತಿಲ್ಲ" ಅಂದೆ.

"ನಾನಿಯ ಅಕ್ಷರ ಕಲಿಸಿದವ" ಅಂದು ವಿಚಿತ್ರ ಸಂತೋಷ ಪಟ್ಟರು.

ನಿಮ್ಮಪ್ಪನಿಗೆ ಟ್ರಜರೀಲಿ ಕೆಲಸ ಕೊಡಿಸ್ದವ ಯಾರ ಗೊತ್ತಾ ?

"ಯ್ಯಾರ ಸಾ ಅಂವ" ಅಂದೆ.

"ನಾನಿಯ ಕಪ್ಪ" ಅಂದರು.

"ಈ ವೆಂಕಟರಮ್ಮಣ್ಣ, ಬಿ. ರಾಚಯ್ಯ ಇವರ್ನೆಲ್ಲ ಮೇಲಕ್ಕೆ ತಂದವ್ರು ಯಾರ ?"

ಪ್ರತಿಯಾಗಿ ನಾನು ಬಾಯ್ತೆರವ ಮೊದಲೆ "ನಾನಿಯ" ಅಂದುಕೊಂಡು ಸಮಾಧಾನಪಟ್ಟರು.

ಸಿದ್ಧಲಿಂಗಯ್ಯ ಗೊತ್ತಾ ನಿನಗೆ ?

"ಯಾವ ಸಿದ್ಧಲಿಂಗಯ್ಯ"

"ಬೆಂಗಳೂರಲಿ ಅವ್ನ ಕಪ್ಪ ಅವನಿಗೆ ಕೆಲ್ಸ ಕೊಡಿಸಿದವರ್‍ಯಾರ ಗೊತ್ತಾ ? ನಾನಿಯಕಪ್ಪ ನಾನಿಯ" ಅವರು ಸಂಕಟ ಪಟ್ಟಂತೆ ಕಾಣಿಸಿತು.

"ದಲಿತ ಕವಿ ಸಿದ್ಧಲಿಂಗಯ್ಯ ನನ್ನ ಸ್ನೇಹಿತರು ಸಾರ್"

"ಹೂ ಅವ್ನೆ ಅವ್ನೆ" ಎಂದು ತಲೆ ಕುಗ್ಗಿಸಿದರು. ತರುವಾಯ ಕೊಂಚ ಕುಗ್ಗಿದ ದನಿಯಲ್ಲಿ ಅವರಂದರು :

"ನಾನು ನಿಮ್ಮಪ್ಪನಿಗೆ ಕೆಲ್ಸಕೊಡಿಸ್ದೆ. ನೀನು ನನಗೆ ದ್ರೋಹ ಬಗೆದೆ ?"

"ಅದಕು ಇದಕು ಸಂಬಂಧವೇ ಇಲ್ಲ ಸಾರ್" ಅನ್ನಲು ಅವರು ಚಿಂತಿತರಾದರು. ನಮ್ಮ ನಡುವೆ ಗಾಢವಾದ ಮೌನ ನೆಲೆಸಿತು. "ನೀನು ಮಾತ್ರವಲ್ಲ ಎಲ್ರು, ಎಲ್ರು ನನ್ನಿಂದ ಸಹಾಯ ಪಡೆದವರೆಲ್ರು ದ್ರೋಹ ಬಗೆದರು" ಆತ ಕೊಂಚ ಉದ್ವಿಗ್ನರಾದರು. ಅವರ ಬಗ್ಗೆ ನನಗೆ ಒಂದು ಬಗೆಯ ಅನುಕಂಪ ಮೂಡಿತು. 30 ವರ್ಷಗಳ ತಮ್ಮ ಸುದೀರ್ಘ ರಾಜಕಾರಣದಲ್ಲಿ ಅವರು ಎಂದೂ ಗೆಲ್ಲಲಿಲ್ಲ. ತಮ್ಮನ್ನೇ ತಾವು ನಂಬದ ಅವರ ದ್ವಂದ್ವ ಮನೋಭಾವ ಅದಕ್ಕೆ ಕಾರಣವೆಂದು ಅವರು ಇದುವರೆಗೂ ತಿಳಿಯಲಿಲ್ಲ

ಅವರು ಡಿಕ್ಟೇಟ್ ಮಾಡಿದರು. ನಾನು ಬರೆದುಕೊಂಡೆ. ಆ ವಾಕ್ಯವನ್ನ ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದ ಮಾಡಲು ಹೇಳಿದರು. ನನಗೆ ಭಯಂಕರ ಕೋಪ ಬಂತು. "ನಾನು ಅನುವಾದ ಮಾಡಲ್ಲ. ಬೇಕಾದ್ರೆ ನೀವೇ ಮಾಡಿ" ಅನ್ನಲಾಗಿ ಅವರು ಮಾತಾಡುತ್ತಾ ಒಂದು ಪ್ರಶ್ನೆಯ ಮುಂದಿಟ್ಟರು.

# ಶೂದ್ರ ಸಂಘಟನೆ ಮತ್ತು ವಚನಕಾರರು

ಲಿಂಗದೇವರು ಹಳೆಮನೆ

'ಶೂದ್ರ ಸಂಘಟನೆ ಮತ್ತು ವಚನಕಾರರು' ಎಂಬ ವಿಷಯದ ಬಗ್ಗೆ ವಿವೇಚನೆಗೆ ತೊಡಗುವ ಮುನ್ನ 'ಶೂದ್ರ' ಎಂಬ ಪರಿಕಲ್ಪನೆ ನಮ್ಮ ಸಮಾಜದಲ್ಲಿ ಹೇಗೆ ಮೂಡಿಬಂತೆಂದು ತಿಳಿಯುವುದು ಅಗತ್ಯ. ಸಾಮಾನ್ಯವಾಗಿ ನಮಗೆ ತಿಳಿದಿರುವಂತೆ 'ಶೂದ್ರ' ಎನ್ನುವ ವರ್ಗ ಹಿಂದೂ ಧರ್ಮದಲ್ಲಿ ಬರುವ ವರ್ಣಾಶ್ರಮ ಧರ್ಮಗಳಲ್ಲಿನ ಚಾತುರ್ವರ್ಣ್ಯಗಳಲ್ಲಿ ಒಂದು. ಇನ್ನಿತರ ಮೂರು ವರ್ಣಗಳೆಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ. ಶೂದ್ರ ಈ ಚಾತುರ್ವರ್ಣ್ಯಗಳಲ್ಲಿ ಕಡೆಯದು ಮತ್ತು ಕೀಳ್ತರಗತಿಗೆ ಸೇರಿದ್ದು. ಇವುಗಳಲ್ಲಿ ಬ್ರಾಹ್ಮಣವರ್ಣ ಪರಮ ಶ್ರೇಷ್ಠವಾದದ್ದು. ಬ್ರಾಹ್ಮಣರ ನಂತರ ಬರುವ ಕ್ಷತ್ರಿಯ, ವೈಶ್ಯ ಸಮಾಜದ ಇನ್ನಿತರ ಪ್ರಮುಖ ವರ್ಣಗಳು. ಶೂದ್ರರು ಈ ಮೂರೂ ಮೇಲ್ವರ್ಗದವರ ಸೇವೆಯನ್ನು ಮಾಡಿಕೊಂಡಿರಬೇಕೆಂಬ ನಿಯಮಕ್ಕೊಳಪಟ್ಟಿದ್ದರು. ಈ ರೀತಿಯ ಸಾಮಾಜಿಕ ಅಸಮಾನತೆ ಬರೀ ಭಾವನಾತ್ಮಕವಾಗಿರದೆ ಕಾನೂನುಬದ್ಧವಾದ ರಚನೆಯಾಗಿ ಘೋಷಿಸಲ್ಪಟ್ಟಿತ್ತು.

ಈ ಚಾತುರ್ವರ್ಣ್ಯದ ಅಸ್ತಿತ್ವ ನಮಗೆ ಮೊದಲು ದೊರಕುವುದೆಂದರೆ "ಪುರುಷ ಸೂಕ್ತ"ದಲ್ಲಿ. ಸಮಾಜದ ಸಂವಿಧಾನಾತ್ಮಕ ರಚನೆಯಾಗಿ ಚಾತುರ್ವರ್ಣ್ಯವನ್ನು ಪುರುಷಸೂಕ್ತದಲ್ಲಿ ಉಲ್ಲೇಖಿಸಲಾಗಿದೆ. ಅಲ್ಲಿ ಬ್ರಾಹ್ಮಣ ವಿದ್ಯೆ ಕಲಿಯುವುದು ಬೇರೆಯವರಿಗೆ ಆಚಾರ್ಯ ಸ್ಥಾನದಲ್ಲಿ ನಿಲ್ಲುವುದು, ಯಜ್ಞಯಾಗಾದಿ ಧಾರ್ಮಿಕ ಕೆಲಸಗಳಲ್ಲಿ ನಿರತನಾಗಿರುವುದು ಎಂದು ಉಲ್ಲೇಖಗೊಂಡಿದ್ದರೆ ಕ್ಷತ್ರಿಯ ಸಮಾಜದ ರಕ್ಷಣೆಯ ಭಾರವನ್ನೂ, ವೈಶ್ಯ ಆರ್ಥಿಕ ವಹಿವಾಟನ್ನು ನಿರ್ವಹಿಸಬೇಕೆಂದೂ ಹೇಳಲಾಗಿದೆ. ಶೂದ್ರ ಮಾತ್ರ ಸಮಾಜದಲ್ಲಿ ಸ್ವಾತಂತ್ರ್ಯವಿಲ್ಲದೆ ಇತರ ಮೂರು ಮೇಲ್ತರಗತಿಯವರ ಸೇವೆ, ಊಳಿಗ, ಮಾಡಿಕೊಂಡಿರಬೇಕೆಂದು ಉಲ್ಲೇಖಿಸಲಾಗಿದೆ. ಪುರುಷ ಸೂಕ್ತದ ಈ ಪ್ರಣಾಳಿಕೆಯನ್ನು ಮುಂದೆ ಬಂದ ವಾಸಿಷ್ಠ ಧರ್ಮ ಮನು ಧರ್ಮಶಾಸ್ತ್ರಗಳು ಅನುಮೋದಿಸಿ ಅದನ್ನು ತಮ್ಮ ಧಾರ್ಮಿಕ ಹಾಗೂ ಬ್ರಾಹ್ಮಣಪರ ನಿಲುವುಗಳಿಂದ ಪುನರ್ವಿಶ್ಲೇಷಿಸಿ ಬ್ರಾಹ್ಮಣರೇ ಶ್ರೇಷ್ಠ, ಶೂದ್ರರು ಸಮಾಜದ ಈ ಅಂತಃಶ್ರೇಣಿಯಲ್ಲಿ ಕೆಳಮಟ್ಟದಲ್ಲಿರುವುದೇ ಧರ್ಮ ಎಂಬ ನಿಲುವು ತಳೆದರು.

ಮನು ಶೂದ್ರರ ಬಗ್ಗೆ ತಳೆದ ನಿಲುವನ್ನು ಕೆಳಕಂಡಂತೆ ಗುರುತಿಸಬಹುದು.

1 ಶೂದ್ರರು ಸಾಮಾಜಿಕ ಶ್ರೇಣಿಯಲ್ಲಿ ಕೆಳಗಿನ ಪಾತಳಿಯಲ್ಲಿರಲು ಮಾತ್ರ ಯೋಗ್ಯರು.

2 ಶೂದ್ರರು ಅಪವಿತ್ರರಾದ್ದರಿಂದ ಅವರ ಕಣ್ಣಿಗೆ ಬೀಳುವಂಥ ಅಥವಾ ಕಿವಿಗೆ ಬೀಳುವಂಥ ಯಾವುದೇ ಪವಿತ್ರಕೆಲಸವನ್ನು ಮಾಡಕೂಡದು.

3 ಸಮಾಜದ ಇನ್ನಿತರ ಮೂರು ವರ್ಗಗಳಿಗೆ ನೀಡುವಷ್ಟು ಗೌರವ ಮತ್ತು ಮಾನ್ಯತೆಯನ್ನು ಅವರಿಗೆ ನೀಡಕೂಡದು.

4 ಶೂದ್ರರಿಗೆ ಸಮಾಜದಲ್ಲಿ ಯಾವುದೇ ಗೌರವವಿಲ್ಲದಿರುವುದರಿಂದ ಅವರ ಜೀವಕ್ಕೂ ಯಾವುದೇ ಮೌಲ್ಯವಿಲ್ಲ. ಆದ್ದರಿಂದ ಅವರನ್ನು ಯಾರೇ ಕೊಂದರೂ ಅದಕ್ಕೆ ಪ್ರತಿಫಲವಾಗಿ ಏನೂ ನೀಡಬೇಕಾಗಿಲ್ಲ. ಹಾಗೇನಾದರೂ ನೀಡಿದಲ್ಲಿ ಏನಾದರೂ ಸ್ವಲ್ಪ ಪರಿಹಾರ ನೀಡಿದರೆ ಸಾಕು.

5 ಶೂದ್ರರು ಜ್ಞಾನಾರ್ಜನೆಗೆ ಅಪಾತ್ರರು. ಅವರಿಗೆ ಶಿಕ್ಷಣ ನೀಡುವುದೆಂದರೆ ಅದು ಪಾಪ ಮತ್ತು ಶಿಕ್ಷಾರ್ಹ.

6 ಪ್ರಭುತ್ವದಡಿ ಶೂದ್ರರು ಯಾವುದೇ ಅಧಿಕಾರವನ್ನು ಚಲಾಯಿಸಲು ಅನರ್ಹರು.

7 ಶೂದ್ರರ ಕರ್ತವ್ಯವೆಂದರೆ ಉಚ್ಚವರ್ಣದವರನ್ನು ಸೇರಿಸುವುದು. ಆ ಮೂಲಕ ಮಾತ್ರ ಅವರು ಮುಕ್ತಿ ಹೊಂದಲು ಸಾಧ್ಯ.

8 ಉಚ್ಚ ವರ್ಣದವರು ಶೂದ್ರರ ಜೊತೆ ಅಂತರ್ಜಾತಿಯ ವಿವಾಹವಾಗಕೂಡದು. ಆದರೆ ಶೂದ್ರ ಹೆಂಗಸರ ಜೊತೆ ಲೈಂಗಿಕ ಸಂಬಂಧ ಬೆಳೆಸಬಹುದು. ಶೂದ್ರ ಗಂಡಸರು ಉಚ್ಚವರ್ಣದವರ ಹೆಂಗಸಿನ ಜೊತೆ ಲೈಂಗಿಕಸಂಬಂಧ ಬೆಳೆಸಿದರೆ ಅಂಥವರಿಗೆ ಕಠೋರ ಶಿಕ್ಷೆ ನೀಡಬೇಕು.

9 ಶೂದ್ರರು ಜನ್ಮತಳೆದಿರುವುದೇ ಉಚ್ಚ ವರ್ಣದವರ ಊಳಿಗಕ್ಕಾಗಿ. ಆದ್ದರಿಂದ ಅವರು ಶಾಶ್ವತವಾಗಿ ಊಳಿಗದವರಾಗಿಯೇ ಉಳಿಯಬೇಕು.

ಮನುವಿನ ಈ ಮಾತುಗಳು ಬರೀ ಅಭಿಪ್ರಾಯವಲ್ಲ. ಅಂದಿನ ಸಮಾಜದ ಕಾನೂನು ವ್ಯವಸ್ಥೆಯೆಂದು ಮಾನ್ಯ ಮಾಡಲ್ಪಟ್ಟವು. ಈ ಕಾನೂನುವ್ಯವಸ್ಥೆಯಿಂದ ಶೂದ್ರರಸ್ಥಿತಿ ಪ್ರಾಣಿಗಳ ಮಟ್ಟಕ್ಕಿಳಿಯಲ್ಪಟ್ಟಿತು. ಅಲ್ಲಿಯವರೆಗೆ ಭಾವನಾತ್ಮಕವಾಗಿ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದ ಉಚ್ಚ ವರ್ಣದವರ ಕಾರ್ಯಾಚರಣೆ ಬಹಿರಂಗವಾಗಿ ಕಾನೂನಿನ ಆಶ್ರಯದಲ್ಲಿ ಶೂದ್ರರ ಮೇಲಿನ ದಬ್ಬಾಳಿಕೆಯ ರೂಪದಲ್ಲಿ ಪ್ರಕಟವಾಗತೊಡಗಿತು. ಶೂದ್ರರ ಜೀವಕ್ಕೆ, ಹೆಂಡಿರು ಮಕ್ಕಳಿಗೆ ಅವರ ಆಸ್ತಿಪಾಸ್ತಿಗೆ ಯಾವುದೇ ರೀತಿಯ ರಕ್ಷಣೆ ದೊರಕದಾಯಿತು.

ಚಾತುರ್ವರ್ಣ್ಯದ ಶೂದ್ರರಜೊತೆ ಆರ್ಯವರ್ಗದಲ್ಲಿ ಸೇರಲ್ಪಟ್ಟವೆಂದರೆ ದಸ್ಯು ಅಥವಾ ದಾಸರೆಂದು ಕರೆಯಲ್ಪಟ್ಟವರು. ಎ. ಸಿ. ದಾಸ್ ಪ್ರಕಾರ "ದಾಸ ಅಥವಾ ದಸ್ಯುಗಳು ಗುಲಾಮರು ಅಥವಾ ವೇದಪೂರ್ವ ಬುಡಕಟ್ಟು ಜನಾಂಗದವರು. ಆರ್ಯರು ತಮ್ಮ ಅಧಿಕಾರವನ್ನು ಸ್ಥಾಪಿಸಿಕೊಂಡಾಗ ನಡೆದ ಘರ್ಷಣೆಯಲ್ಲಿ ಸೆರೆ ಸಿಕ್ಕಿದ ಇವರನ್ನು ಗುಲಾಮರನ್ನಾಗಿ ಬಳಸಿಕೊಳ್ಳಲಾಯಿತು. ಹೀಗೆ ಬೆಳೆದ ಗುಲಾಮ ಸಂತತಿಯನ್ನು ಶೂದ್ರರ ಜೊತೆ ಸೇರಿಸಲಾಯಿತು. ಇದರಿಂದ ಶೂದ್ರರು ಬೇರೆ ಬೇರೆ ಮೂಲಗಳಿಂದ ಬಂದ, ಸಮಾಜದಲ್ಲಿ ಜೀವಸತ್ವವಿಲ್ಲದೆ ಬದುಕುವ ಒಂದು ವರ್ಗವಾಗಿ ನಿಂತಿತು.

ವಾಸಿಷ್ಠ ಧರ್ಮ ಬ್ರಾಹ್ಮಣ. ಕ್ಷತ್ರಿಯ, ವೈಶ್ಯರು ಉಚ್ಚ ವರ್ಣದವರೆಂದೂ ಈ ಮೂರು ವರ್ಣದವರು ದ್ವಿಜರೆಂದೂ ಪ್ರತಿಪಾದಿಸಿದೆ. ದ್ವಿಜರು ಎಲ್ಲಾ ಧಾರ್ಮಿಕ ಕಾರ್ಯಗಳಲ್ಲೂ ಭಾಗವಹಿಸಲು ಅರ್ಹರು. ದ್ವಿಜರೆಂದರೆ ಎರಡುಬಾರಿ ಜನಿಸಿದವರು. ಮೊದಲನೆ ಸಾರಿ ತಾಯಿಯ ಉದರದಿಂದ ಜನಿಸುವುದು. ಎರಡನೆಯದು ಪವಿತ್ರ ಯಜ್ಞೋಪವೀತ ಧಾರಣ ಸಂದರ್ಭದಲ್ಲಿ ಪುನರ್ಜನ್ಮ ಪಡೆಯುವುದು. ಇಲ್ಲಿ ಸಾವಿತ್ರಿ ತಾಯಿ ಮತ್ತು ಗುರುವಾದವನು ತಂದೆ. ವಾಸಿಷ್ಠ ಧರ್ಮ ಶೂದ್ರರನ್ನುಳಿದು ಮಿಕ್ಕವರಿಗೆ ಮಾತ್ರ ಪವಿತ್ರರಾಗುವ ಹಕ್ಕನ್ನು ದಯಪಾಲಿಸಿರುವುದನ್ನು ಕಾಣಬಹುದು.

ವರ್ಣಾಶ್ರಮ ಧರ್ಮದ ಬೆಳವಣಿಗೆಯನ್ನು ಗಮನಿಸಿದಾಗ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಒಂದು ಬಲಿಷ್ಠ ಗುಂಪಾಗಿಯೂ ಶೂದ್ರರು ಮಾತ್ರ ದುರ್ಬಲ ಗುಂಪಾಗಿಯೂ ವಿಭಜನೆಯಾಗಿರುವುದನ್ನು ಗಮನಿಸಬಹುದು. ಬ್ರಾಹ್ಮಣರು ಎಲ್ಲಾ ಕಾಲದಲ್ಲಿಯೂ ಸಮಾಜದಲ್ಲಿ 'ಇದಂ ಇತ್ಥಂ' ಎಂದು

ಹೇಳುವ ಸ್ಥಾನದಲ್ಲಿದ್ದುದರಿಂದಲೂ ಶೂದ್ರರಿಗೆ ವಿರುದ್ಧವಾದ ಶಾಸನಗಳನ್ನು ರೂಪಿಸುವಲ್ಲಿ ಗಣನೀಯ ಪಾತ್ರವಹಿಸಿದ್ದರಿಂದಲೂ ಸಹಜವಾಗಿ ಶೂದ್ರರಿಗೆ ಕ್ಷತ್ರಿಯ, ವೈಶ್ಯರಿಗಿಂತ ಬ್ರಾಹ್ಮಣರ ಮೇಲೆ ದ್ವೇಷ ತಿರಸ್ಕಾರ ಭುಗಿಲೆದ್ದದ್ದು ಸಹಜವಾಗಿರಬೇಕು.

ಮೇಲೆ ತಿಳಿಸಿದ ವಿಷಯಗಳು ಸಾಮಾನ್ಯವಾಗಿ ಎಲ್ಲಾ ಕಡೆ ಜನಪ್ರಿಯವಾಗಿರುವ ವಿಷಯ. ಆದರೆ ಡಾ॥ ಅಂಬೇಡ್ಕರ್ ತಮ್ಮ 'ಶೂದ್ರರು ಯಾರು?' ಎಂಬ ಪುಸ್ತಕದಲ್ಲಿ ಪರಂಪರಾಗತವಾಗಿ ಬಂದ ಚಿಂತನೆಗಿಂತ ಕೊಂಚ ಭಿನ್ನವಾಗಿ ಚಿಂತಿಸಿದ್ದಾರೆ. ಶೂದ್ರರ ಸ್ಥಿತಿಗತಿಗಳ ಬಗ್ಗೆ ಹೆಚ್ಚು ಪ್ರಾಮಾಣಿಕವಾಗಿ ಚಿಂತಿಸಿರುವ ಇವರು ಆರ್ಯ ಸಮಾಜಿಗರ ಸಿದ್ಧಾಂತಗಳನ್ನು ಪೂರ್ಣ ನಿಶ್ಶೇಷಗೊಳಿಸುವ ತನಕ ಹಿಂದೂ ಸಮಾಜದ ಪುನರುತ್ಥಾನ ಸಾಧ್ಯವಿಲ್ಲ ಎಂದು ವ್ಯಗ್ರವಾಗಿ ಹೇಳಿದ್ದಾರೆ. ಬ್ರಾಹ್ಮಣ ಪರಂಪರೆ ಸೃಷ್ಟಿಸಿರುವ ಸಾಹಿತ್ಯವೆಲ್ಲವೂ ಅಬ್ರಾಹ್ಮಣ ವಿದ್ವಾಂಸನಿಗೆ ತರ್ಕಶೂನ್ಯವಾಗಿದ್ದು ಅವೆಲ್ಲಾ ಕಗ್ಗಗಳು ಎಂಬ ಅನಿಸಿಕೆ ಬಾರದಿರದು ಎನ್ನುವ ಅಂಬೇಡ್ಕರ್, ವೇದದಾದಿಯಿಂದ ಹಿಡಿದು ಇಂದಿನವರೆಗೆ ಹಬ್ಬಿರುವ ಶೂದ್ರ ಪರಂಪರೆಯ ಬಂಡಾಯ ವಕ್ತಾರರಾಗಿ ನಿಲ್ಲುತ್ತಾರೆ. ತಮ್ಮ ಪುಸ್ತಕದಲ್ಲಿ ಮೊದಲಿಗೆ ಮೂರೇ ವರ್ಣಗಳಿದ್ದುವೆಂದು ಅಂಬೇಡ್ಕರ್ ಪ್ರತಿಪಾದಿಸುತ್ತಾರೆ. ಅವರ ಪ್ರಕಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ವರ್ಣಗಳು ಮಾತ್ರವೇ ಇದ್ದದ್ದು.

1) ಶೂದ್ರರು ಆರ್ಯರು.
2) ಶೂದ್ರರು ಕ್ಷತ್ರಿಯ ವರ್ಗಕ್ಕೆ ಸೇರಿದವರು.
3) ಪ್ರಾಚೀನ ಆರ್ಯ ಕ್ಷತ್ರಿಯರು ತುಂಬಾ ಪ್ರಬಲರಾಗಿದ್ದು ಬಲಿಷ್ಠರಾಗಿದ್ದರು.

ಶೂದ್ರರು ಕ್ಷತ್ರಿಯ ವರ್ಗದವರೆಂದು ಇದ್ದ ಮೇಲೆ ಅವರು ಶೂದ್ರ ಪಂಗಡವಾಗಿ ವಿಭಜನೆಗೊಂಡಿದ್ದು ಹೇಗೆ? ಅಲ್ಲದೇ ಮೊದಲು ಇದ್ದ ಮೂರು ವರ್ಣಗಳಲ್ಲಿ ವೈಶ್ಯರು ಕೀಳುವರ್ಗದವರೆಂದು ಪರಿಗಣಿಸಲ್ಪಟ್ಟಿದ್ದರು. ಅವರಿಗಿಂತ ಕೀಳಾಗಿ ಶೂದ್ರರು ಮಾರ್ಪಟ್ಟಿದ್ದು ಹೇಗೆ? ಇದಕ್ಕೆ ಅಂಬೇಡ್ಕರ್ ಕೊಡುವ ಉತ್ತರ: ಶೂದ್ರರಾಜರಿಗೂ (ಕ್ಷತ್ರಿಯರು) ಬ್ರಾಹ್ಮಣರಿಗೂ ಸತತವಾದ ಘರ್ಷಣೆ ನಡೆಯುತ್ತಿತ್ತು. ಈ ಘರ್ಷಣೆಯಲ್ಲಿ ಬ್ರಾಹ್ಮಣರು ಹೆಚ್ಚು ಸಾವು ನೋವುಗಳಿಗೆ ಈಡಾಗುತ್ತಿದ್ದರು. ಇದರ ಫಲಿತಾಂಶ ಬ್ರಾಹ್ಮಣರು ಶೂದ್ರ ರಾಜರಿಗೆ ಯಜ್ಞೋಪವೀತ ಧಾರಣೆಯನ್ನು ನೆರವೇರಿಸುವುದನ್ನು ನಿರಾಕರಿಸಿದರು. ಆದರೆ ಅಂದಿನ ಸಮಾಜದಲ್ಲಿ ಧಾರ್ಮಿಕ ಪರಿಧಿಯೊಳಗೆ ಬರದ ರಾಜನಿಗೆ ಗೌರವವಿರುತ್ತಿರಲಿಲ್ಲ. "ಯಜ್ಞೋಪವೀತ"ದ ಧಾರ್ಮಿಕ ಕ್ರಿಯೆಯಿಂದ ವಂಚಿತರಾದ ಶೂದ್ರರಾಜರು ವೈಶ್ಯರಿಗಿಂತ ಕೆಳಮಟ್ಟಕ್ಕೆ ತಳ್ಳಲ್ಪಟ್ಟು ನಾಲ್ಕನೆ ವರ್ಣವಾಗಿ ಮಾರ್ಪಟ್ಟರು.

ಅಂಬೇಡ್ಕರ್‌ರ ವಾದವನ್ನು ಒಪ್ಪಲಿ ಬಿಡಲಿ ಆದರೆ "ಯಜ್ಞೋಪವೀತ" ಧಾರ್ಮಿಕ ಕ್ರಿಯೆ ವರ್ಣಾಶ್ರಮ ಧರ್ಮವನ್ನು ರೂಪಿಸುವಲ್ಲಿ ಮತ್ತು ಶೂದ್ರರನ್ನು ಮಿಕ್ಕ ಮೂರು ವರ್ಣಗಳಿಗಿಂತ ದೂರ ಇಡುವುದರಲ್ಲಿ ಅತ್ಯಂತ ಯಶಸ್ವಿಯಾಯಿತೆಂಬುದನ್ನು ನಿರ್ವಿವಾದವಾಗಿ ಒಪ್ಪಲೇಬೇಕು.

ನಿಕೃಷ್ಟರೆಂದು ಪರಿಗಣಿಸಲ್ಪಟ್ಟ ಶೂದ್ರರು ಸಂಘಟಿತರಾಗಿ ಹೋರಾಟ ನಡೆಸಿದ್ದರ ಬಗ್ಗೆ ನಮಗೆ ಹೆಚ್ಚಿನ ಮಾಹಿತಿಗಳು ಸಿಕ್ಕಿಲ್ಲ. ಅಲ್ಲಲ್ಲಿ ವಿಶ್ವಾಮಿತ್ರನಂತಹ ಒಂದೆರಡು ಅಪವಾದಗಳು ಮಾತ್ರ ದೊರಕುತ್ತವೆ. ಬೌದ್ಧಧರ್ಮದ ಪ್ರತಿಪಾದಕನಾದ ಬುದ್ಧ ಮಾತ್ರ ಮೊದಲಿಗೆ ಈ ವರ್ಣಾಶ್ರಮ ಧರ್ಮವನ್ನು ವಿರೋಧಿಸಿ ಸಮಾನತಾ ಮೌಲ್ಯಗಳನ್ನು ಪ್ರತಿಪಾದಿಸಿದರೂ ಶೂದ್ರರು ಒಂದಾಗಿ ಪ್ರಬಲ ಪ್ರತಿರೋಧವನ್ನು ಒಡ್ಡಲು ತಯಾರಾಗಲಿಲ್ಲ. ತಮ್ಮ ಹೀನಸ್ಥಿತಿಯನ್ನು ಮಾನಸಿಕವಾಗಿ ದೃಢಪಡಿಸಿಕೊಂಡು ಮೇಲ್ವರ್ಗದವರ ಸೇವೆಯಲ್ಲೇ ತಮ್ಮ ಇಡೀ ಜೀವನವನ್ನು ದುಡಿಸತೊಡಗಿದರು. ಭಾತೃಪ್ರೇಮ, ಸ್ವಾತಂತ್ರ್ಯ ಸಮಾನತೆ ಎಂಬ ಪರಿಕಲ್ಪನೆಗಳು ಅವರ ಕಲ್ಪನೆಯ ಪರಿಧಿಯೊಳಗೆ ಸುಳಿಯಲೇ ಇಲ್ಲ. ಉಚ್ಚ ಶಿಕ್ಷಣವನ್ನು ಪಡೆದು ಆಧ್ಯಾತ್ಮದ ಬಗ್ಗೆ ಚಿಂತಿಸುವುದಿರಲಿ, ಬಾಳು ಹಸನಾದೀತೆಂಬ ಭ್ರಮೆಯನ್ನುಳಿದು ಜೀವವನ್ನು ದೇಕತೊಡಗಿದರು. ತಮ್ಮ ಎಲ್ಲಾ ಒತ್ತಾಸೆಗಳನ್ನೂ ಭದ್ರವಾಗಿ ಅದುಮಿ ಹಿಡಿದರು. ಶೂದ್ರರ ಈ ಅನಿಶ್ಚಿತ ಮತ್ತು ಕ್ಷೋಬೆಗೊಂಡ ಜೀವನಕ್ಕೆ ತಕ್ಕ ರೂಪುಕೊಟ್ಟು ಅವರೂ ಎಲ್ಲರಂತೆ ಸಮಾನರು ಎಂಬುದನ್ನು ತೋರಿಸಿಕೊಡುವ ಒಂದು ಸಾಮೂಹಿಕ ಪ್ರಯತ್ನ ಕರ್ನಾಟಕದ ಕಲ್ಯಾಣದಲ್ಲಿ ಬಸವಣ್ಣನ ನೇತೃತ್ವದಲ್ಲಿ ಹನ್ನೆರಡನೇ ಶತಮಾನದಲ್ಲಿ ನಡೆಯಿತು.

2

ಹನ್ನೆರಡನೆಯ ಶತಮಾನವನ್ನು ವಚನಕಾರರ ಯುಗವೆಂದು ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ನಾವು ಗುರುತಿಸುತ್ತಾ ಬಂದಿದ್ದರೂ ಆ ಶತಮಾನದ ಹಿಂದಿನಿಂದಲೂ ವಚನಕಾರರ ಬೆಳವಣಿಗೆಗೆ ಇತ್ತೆಂಬುದು ಸರ್ವವಿದಿತವಾಗಿದೆ. ಹನ್ನೆರಡನೇ ಶತಮಾನದಲ್ಲಿನ ಕರ್ನಾಟಕದ ಸ್ಥಿತಿಗತಿಗಳು ರಾಜಕೀಯವಾಗಿ, ಧಾರ್ಮಿಕವಾಗಿ ಸಮತೋಲನ ಹೊಂದಿರಲಿಲ್ಲ. ಭಾರತದಲ್ಲಿನ ಯಾವುದೇ ಕಡೆಯಲ್ಲಿದ್ದಂತಹ ಊಳಿಗಮಾನ್ಯ ವ್ಯವಸ್ಥೆ ಇಲ್ಲಿಯೂ ಆಳವಾಗಿ ಬೇರೂರಿತ್ತು. ಧರ್ಮವೂ ಊಳಿಗಮಾನ್ಯ ವ್ಯವಸ್ಥೆಯ ಒಂದು ಪ್ರಧಾನ ಅಂಗವಾಗಿ ಶೋಷಕ ವ್ಯವಸ್ಥೆಯ ಮುಖವಾಣಿಯಾಗಿತ್ತು. ಹಿಂದೂಧರ್ಮ ಆ ಮಟ್ಟಕ್ಕಾಗಲೇ ಪುನರ್ ವಿಶ್ಲೇಷಣೆಗಳನ್ನು ಪಡೆದು ಇನ್ನೂ ಹೆಚ್ಚು ಡಾಂಭಿಕವಾಗಿತ್ತು. ಬುದ್ಧನಿಂದ ಕೆಲಕಾಲ ಘಾತಿಸಲ್ಪಟ್ಟಿದ್ದರೂ ಶಂಕರಾಚಾರ್ಯರಿಂದ ಪುನರ್ ಸ್ಥಾಪಿಸಲ್ಪಟ್ಟು ವರ್ಣಾಶ್ರಮ ಧರ್ಮಗಳು ಜಾತೀಯ ಹೆಸರಿನಲ್ಲಿ ಅಂತರವನ್ನು ಹೆಚ್ಚಿಸಿಕೊಳ್ಳುತ್ತಲೇ ಬಂದವು. ಜೊತೆಗೆ ಹಿಂದೂಧರ್ಮದೊಳಗೇ ಶೈವ, ವೈಷ್ಣವ ಭೇದ ತಲೆದೋರಿ ಪಂಗಡಗಳುದ್ಭವಿಸಿ ಅಂತಃಕಲಹಗಳು ದಿನನಿತ್ಯದ ಘಟನೆಗಳಾದವು. ಧಾರ್ಮಿಕವಾಗಿ ನಡೆಯುತ್ತಿದ್ದ ಚಟುವಟಿಕೆಗಳು ಕ್ರಮೇಣ ಕರ್ಮಾಂತರಗೊಂಡು ವಾಮಾಚಾರ ಪ್ರಯೋಗಗಳು, ವಿಗ್ರಹಪೂಜೆ, ತಾಂತ್ರಿಕ ಪ್ರಯೋಗಗಳು ಹೆಚ್ಚಾದವು. ಶೈವರಲ್ಲಿ ವಿವಿಧ ಪಂಗಡಗಳು ಏರ್ಪಟ್ಟು ಶಂಕರನ ಅದ್ವೈತ ಸಿದ್ಧಾಂತಕ್ಕೆ ಪ್ರತಿಯಾಗಿ ಶಕ್ತಿ ವಿಶಿಷ್ಟ ಸಿದ್ಧಾಂತವನ್ನು ರೂಪಿಸ ಹೊರಟು, ಇಡೀ ಸಿದ್ಧಾಂತವನ್ನೇ ವಿಕೃತಗೊಳಿಸಲಾಯಿತು. ಇಂಥ ಹದಗೆಟ್ಟ ಪರಿಸ್ಥಿತಿಯಲ್ಲಿ ಬಸವಣ್ಣ ಕಲ್ಯಾಣದಲ್ಲಿ ವೀರಶೈವ ಸಿದ್ಧಾಂತದ ಪ್ರತಿಪಾದಕನಾಗಿ ಸಂಘಟಕಾರನಾಗಿ ಮೇಲೆ ಬರುತ್ತಾನೆ. "ಮೇಲು ಕೀಳೆಂಬ ಭಾವನೆಯಿಲ್ಲದೆ ಸದ್ಗುಣಗಳಿಂದಲೇ ಯೋಗ್ಯತೆಯನ್ನು ನಿರ್ಧರಿಸುವ ಮತ್ತು ಎಲ್ಲರೂ ಸಮಾನ ಅವಕಾಶಗಳನ್ನು ಪಡೆಯಬಲ್ಲ ಆದರ್ಶ ಸಮಾಜದ ರಚನೆ" ಬಸವಣ್ಣನ ಉದ್ದೇಶವಾಗಿತ್ತು. ಅದಕ್ಕೆ ಅನುಗುಣವಾಗಿ ಸಮಾಜದ ಮನೋಧರ್ಮ ಬದಲಾಗಬೇಕಿತ್ತು. ಹಿಂದಿನಿಂದ ಕೆಳವರ್ಗದವರ ಮೇಲಿದ್ದ ತಿರಸ್ಕಾರ ಬದಲಾಗಿರಲಿಲ್ಲ. ಬಸವಣ್ಣ ಯುಗಯುಗಾಂತರದಿಂದಬಂದಿದ್ದ ಮನೋಧರ್ಮವನ್ನು ಬದಲಾಯಿಸಲು ಮುಂದಾದ.

ಅಂದಿನ ಸಮಾಜದಲ್ಲಿ ಮೇಲು ಕೀಳೆಂಬ ಭಿನ್ನತೆಯನ್ನು ತೊಡೆದು ಹಾಕಲು ಬಸವಣ್ಣ ಮುಂದಾದಾಗ ಅವನಿಗೆ ಎದುರಾದ ಸಮಸ್ಯೆಗಳು ಅನೇಕ. ಪ್ರಥಮವಾಗಿ ಅವನ ಗಮನ ಸೆಳೆದವರು ಶೂದ್ರರು. ಅಥವಾ ಸಮಾಜದಲ್ಲಿ ಕೀಳುಸ್ಥಾನದಲ್ಲಿದ್ದು ಕೃಷಿಕರಾಗಿದ್ದವರು. ಯುಗಯುಗದಿಂದ ಸೌಲತ್ತುಗಳನ್ನು ಅನುಭವಿಸಿಕೊಂಡು ಬಂದವರ

ಬ್ರಾಹ್ಮಣರಿಗೆ ವಿರುದ್ಧವಾಗುವಷ್ಟು ಮಹಾನಂತ ಬಸವಣ್ಣ ಬೆಳೆಯಲು ತೊಡಗಿದ್ದು ಶೂದ್ರರ ಸಂಘಟನೆಗೆ. ಇದಕ್ಕೆ ಅವನು ಅನುಸರಿಸಿದ ಮಾರ್ಗವೆಂದರೆ ಭಾತೃಪ್ರೇಮ, ಸಮಾನತೆ, ಸ್ವಾತಂತ್ರ್ಯ. ಈ ಮೂರರಿಂದಲೂ ವಂಚಿತರಾಗಿದ್ದ ಶೂದ್ರರು ಈಗ ಸಿಕ್ಕಿದ ಅವಕಾಶವನ್ನು ಬಳಸಿಕೊಳ್ಳಲು ಮುಂದಾದರು. ಜಾತಿ ಭೇದವಿಲ್ಲದ, ಧಾರ್ಮಿಕ ದ್ವೇಷವಿಲ್ಲದ, ಅಂತಸ್ತು ಅಧಿಕಾರಗಳ ವ್ಯತ್ಯಾಸವಿಲ್ಲದ ಈ ಹೊಸ ಪ್ರಣಾಳಿಕೆಯಡಿ ಬಹಳ ಜನ ಶೂದ್ರರು ಬಂದು ನೆಲೆಸತೊಡಗಿದರು. ಬಸವಣ್ಣ ಇವರ ಸಮೂಹ ಸಭೆಗಾಗಿ "ಅನುಭವ ಮಂಟಪ"ವೆಂಬ ಕೇಂದ್ರವನ್ನೇ ಸ್ಥಾಪಿಸಿದನು. ಈ ಅನುಭವ ಮಂಟಪದಲ್ಲಿ ಮೂರುನೂರು ಜನ ಗಂಡಸರು ಮತ್ತು ಅರವತ್ತಮೂರು ಜನ ಹೆಂಗಸರು ಇದ್ದರೆಂದು ತಿಳಿದು ಬಂದಿದೆ.

ಅನುಭವ ಮಂಟಪದಲ್ಲಿ ಸೇರಿದ್ದವರಲ್ಲಿ ಬಹಳಷ್ಟು ಜನ ಕೆಳವರ್ಗದಿಂದ ಬಂದವರು. ಆದರೂ ವಿವಿಧ ವೃತ್ತಿ ಮೂಲಗಳಿಂದ, ಸ್ಥಾನಗಳಿಂದ ಬಂದವರೂ ಇದ್ದರು. ಅವರಲ್ಲಿ ಹಗ್ಗ ಹೊಸೆಯುವವರು, ಮಡಿವಾಳರು, ಮೇದಾರರು, ಪಶುಪದವರು, ಅಂಬಿಗರು, ತುರುಗಾಹಿಗಳು, ಸುಂಕದವರು, ಮಾದಾರರು, ತಳವಾರರು, ಗಾಣದವರು, ವೈದ್ಯರು, ಸೂಜಿ ಕಾಯಕದವರು, ಚಾಟಿ ಕಾಯಕದವರು, ಕೊಟ್ಟಣದವರು, ಮೋಳಿಗೆಯವರು, ಅಕ್ಕಸಾಲಿಗರು, ಬಡಗಿಗಳು ಇನ್ನೂ ಮುಂತಾದ ಕಾಯಕದವರು ಇದ್ದರು. ಇವರೆಲ್ಲರೂ ಹಿಂದೂ-ಧರ್ಮ ಶೂದ್ರರೆಂದು ಪರಿಗಣಿಸುವ ವರ್ಗದಿಂದ ಬಂದವರು. ಅಲ್ಲದೆ ಹಿಂದೂಧರ್ಮ "ಪಂಚಮ"ರೆಂದು ಪರಿಗಣಿಸುವ ಅಸ್ಪೃಶ್ಯರೂ ಸಹ ಇದ್ದರು. ಇವರ ಜೊತೆಗೆ ಬ್ರಾಹ್ಮಣ ಮೂಲದವರು, ಕ್ಷತ್ರಿಯ ಮೂಲದವರು, ವೈಶ್ಯ ಮೂಲದವರೂ ಇದ್ದರು. ಆದರೆ ಇವರು ವರ್ಣಾಶ್ರಮ ಧರ್ಮವನ್ನು ವಿರೋಧಿಸಿ ಸಮಾನತಾ ಆಂದೋಲನದ ಮೇಲೆ ಶೂದ್ರರ ಜೊತೆ ಒಂದುಗೂಡಲು ಬಂದವರು. ಕಲ್ಯಾಣದಲ್ಲಿ ನೆರೆದ ಈ ಶೂದ್ರರು ಬಹುತೇಕ ಭಾರತದ ಎಲ್ಲ ಭಾಗಗಳಿಂದಲೂ ಬಂದವರು. ಆ ಶೂದ್ರರಿಗೆ ಸಮಾನತಾ ವೇದಿಕೆಯೊಂದು ರೂಪಿತವಾಗಿದೆಯೆಂದು ತಿಳಿದು ದೂರ ದೂರದಿಂದ ಸೂಜಿಗಲ್ಲಿನಂತೆ ಆಕರ್ಷಿತವಾಗಿ ಕಲ್ಯಾಣಕ್ಕೆ ಬಂದಿರಬೇಕು. ಸೊಲ್ಲಾಪುರ, ಬಿಜಾಪುರ, ಕಲ್ಬುರ್ಗಿ, ಮಹಾರಾಷ್ಟ್ರ, ಮೈಸೂರು, ಕೇರಳ, ಆಂಧ್ರಪ್ರದೇಶ, ತಮಿಳುನಾಡು, ಒರಿಸ್ಸ, ಬನಾರಸ್, ಗುಜರಾತ್ ಕಡೆಯಿಂದೆಲ್ಲಾ ಶೂದ್ರರು ಇಲ್ಲಿಗೆ ಬಂದು ನೆರೆಯತೊಡಗಿದರು.

ಇಷ್ಟು ಜನ ಶೂದ್ರರನ್ನು ಇಷ್ಟು ಪ್ರಬಲವಾಗಿ ಆಕರ್ಷಿಸಲು ಕಾರಣ ಬಸವಣ್ಣ ರೂಪಿಸಿದ ಸಮಾನತಾ ಆಂದೋಲನವೆಂಬುದು. ಆದರೆ ಆ ಸಮಾನತಾ ಆಂದೋಲನದ ನಿರ್ದಿಷ್ಟ ಸ್ವರೂಪವೇನು? ವೈದಿಕ ಧರ್ಮದಲ್ಲಿ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಿಗೆ ಮಾತ್ರ "ಯಜ್ಞೋಪವೀತ"ದ ಹಕ್ಕು ಇದೆ ಎಂದು ಹೇಳಿದ್ದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಶೂದ್ರರು ಮಾತ್ರ ಇದರಿಂದ ವಂಚಿತರಾಗಿ ತನ್ಮೂಲಕ ಶಿಕ್ಷಣ ಪಡೆಯುವ, ಧಾರ್ಮಿಕಕ್ರಿಯಾಚರಣೆಯಲ್ಲಿ ಭಾಗವಹಿಸುವ ಅವಕಾಶವನ್ನು ಕಳೆದುಕೊಂಡಿದ್ದರು. ಇದು ಭಾವನಾತ್ಮಕವಾಗಿ ಅವರನ್ನು ತುಂಬಾ ಕಾಡುತ್ತಿದ್ದ ಪ್ರಶ್ನೆ. ಆ ಕೀಳರಿಮೆಯನ್ನು ಮೊದಲು ಹೋಗಲಾಡಿಸಬೇಕಿತ್ತು. ಅದಕ್ಕೆ ಬಸವಣ್ಣ ಹಿಡಿದ ಮಾರ್ಗ ಲಿಂಗಧಾರಣೆ. ಲಿಂಗಧಾರಣೆಗೆ ಅವರು ಇವರೆಂಬ ಭೇದವೇ ಇಲ್ಲ. ಅಲ್ಲಿ ಎಲ್ಲರೂ ಸಮಾನರು. ಹೆಣ್ಣು ಗಂಡೂ ಸಹ, ಈ ವಿಷಯದಲ್ಲಿ ವಚನಕಾರರು ವರ್ಣಾಶ್ರಮ ಧರ್ಮಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಹೆಣ್ಣುಗಳಿಗೂ ಲಿಂಗ ಧಾರಣೆ ಮಾಡಿದರು. ಉಚ್ಚ ವರ್ಗಗಳಲ್ಲಿ "ಯಜ್ಞೋಪವೀತ" ಧಾರಣೆ ಗಂಡಸರಿಗಷ್ಟೇ ಮೀಸಲು ಅವರು ಹೆಂಗಸರನ್ನು ಶೂದ್ರರಂತೆ ಪರಿಗಣಿಸುತ್ತಿದ್ದರು. ಆ ಕಟ್ಟಳೆ ಇಲ್ಲಿ ಮುರಿದು ಹೋಯಿತು. ಲಿಂಗಧಾರಣೆಯನ್ನೇ ಮೂಲವನ್ನಾಗಿಟ್ಟುಕೊಂಡು ಆ ಮೂಲಕ ಹೊಸದೊಂದು ಜನಾಂಗವನ್ನೇ ಸೃಷ್ಟಿಸಿದ ಖ್ಯಾತಿ ಬಸವಣ್ಣನಿಗೆ ಸಲ್ಲಬೇಕು.

ಲಿಂಗಧಾರಣೆಯಾದ ಪ್ರತಿಯೊಬ್ಬ ವ್ಯಕ್ತಿಯೂ ಕೀಳರಿಮೆ ಬಿಟ್ಟು ಶ್ರೇಷ್ಠನಾಗಿರುವುದನ್ನು ವಚನಕಾರರಲ್ಲಿ ಕಾಣುತ್ತೇವೆ. ಅವರಿಗೆ ಧಾರ್ಮಿಕ ಚರ್ಚೆಗಳಲ್ಲಿ ಭಾಗವಹಿಸುವ ಸ್ವಾತಂತ್ರ್ಯವಿತ್ತು. ಆದರೆ ಅವರು ಎಂದೂ ತಮ್ಮ ಉದ್ಯೋಗವನ್ನು ಬಿಟ್ಟು ಕಾಲಕಳೆಯುತ್ತಿರಲಿಲ್ಲ. ಅವರಿಗೆ ಉದ್ಯೋಗ ಪ್ರಮುಖ. ಆದರೆ 'ಉದ್ಯೋಗ'ವನ್ನು 'ಕಾಯಕ'ವನ್ನಾಗಿ ಪರಿವರ್ತಿಸಿದರು, ಕಾಯಕ ಜೀವಿಗಳಾದರು. ಕಾಯಕ ಮಾಡದೆ ಉಣ್ಣುವುದು ಪರಮ ಪಾಪವೆಂದು ತಿಳಿದಿದ್ದರು. ಆದರೆ ಮೂಲ ಕಸುಬನ್ನು ಮುಂದುವರೆಸುತ್ತಲೇ ತಮ್ಮ ಜೀವನ ಮಟ್ಟವನ್ನು, ಚಿಂತನ, ಶಕ್ತಿಯನ್ನು ಸುಧಾರಿಸಿಕೊಳ್ಳ ತೊಡಗಿದರು. ಶೂದ್ರ ಪ್ರಜ್ಞೆ ಬುದ್ಧಿಗಮ್ಯತೆಯೊಂದಿಗೆ ಸಹಭಾವ ಹೊಂದಲು ತೊಡಗಿತು.

ಅಂಬಿಗರ ಶೂದ್ರ ವಚನಕಾರರಲ್ಲಿ ಪ್ರಸಿದ್ಧರಾದವರು ಬಹಳ ಮಂದಿ. ತಾವು ಸಮಾಜದ ತುಂಬಾ ಕೆಳಸ್ತರದಿಂದ ಬಂದವರಾದ್ದರಿಂದ ತಮ್ಮ ಸಹಜ ಅಭಿವ್ಯಕ್ತಿಯೊಡನೆ ಮೇಲ್ವರ್ಗದವರ ಕುಟಿಲತೆಯನ್ನು, ಡಾಂಭಿಕತೆಯನ್ನು, ಸಮಾಜದ್ರೋಹವನ್ನು ಬಹಿರಂಗಪಡಿಸಿದ್ದಾರೆ. ವಚನಕಾರರ ಚಳುವಳಿ ಒಂದು ರೀತಿಯಲ್ಲಿ ಸಂಶ್ಲೇಷಣಾ ಕ್ರಿಯೆ. ಬಸವಣ್ಣಸಂಘ, ಅಲ್ಲಮಸಂಘ ಮೇಲ್ವರ್ಗದ ವಚನಕಾರರು ಕೆಳವರ್ಗದ ಕಡೆ ಸರಿಯುವುದಕ್ಕೆ ಪ್ರಯತ್ನಿಸುತ್ತಿದ್ದಂತೆಯೇ, ಅಂಬಿಗರ ಚೌಡಯ್ಯ ಹರಳಯ್ಯ ಮುಂತಾದ ಕೆಳವರ್ಗದವರು ಮೇಲೇರುವುದಕ್ಕೆ ಪ್ರಯತ್ನಿಸುತ್ತಿದ್ದರು. ಬಹುಶಃ ಸಂಧಿಸುವ ಸ್ಥಳ ಈ ಮಧ್ಯದಲ್ಲಿಯೇ ಇದೆ ಎಂಬುದನ್ನು ಅರಿತವರಲ್ಲಿ ಇವರೇ ಮೊದಲಿಗರೆಂದು ಕಾಣುತ್ತದೆ. ಬಹುಶಃ ಈ ಭೇಟಿಯಲ್ಲೇ "ಕತ್ತಲೆಯೊಳಗೆ ಬೆಳಕು ಬಿದ್ದಂತಾಯ್ತು ಗುಹೇಶ್ವರನ ಶರಣ ಮಡಿವಾಳ ಮಾಚಿತಂದೆಯ ಕೃಪೆಯಿಂದ" ಎಂದು ಅಲ್ಲಮ ಪ್ರಭು ಮಡಿವಾಳ ಮಾಚಿದೇವನ ಬಗ್ಗೆ ಹೇಳಿರಬೇಕು.

ವಚನಕಾರ ಸಂಘಟನೆ ಪ್ರಾರಂಭವಾಗುವಾಗ ಜಾತಿಯ ಪ್ರಾಬಲ್ಯ ಹೆಚ್ಚಾಗಿದ್ದನ್ನು ಎಲ್ಲರೂ ಬಲ್ಲರು. ಕೀಳುಜಾತಿಯವರನ್ನು ಒಂದುಗೂಡಿಸಿ ಬಸವಣ್ಣ ನಡೆಸುತ್ತಿದ್ದ ಗೋಷ್ಠಿಗಳು ಮೇಲ್ವರ್ಗದ ಬ್ರಾಹ್ಮಣರಿಗೆ ಸಹಿಸಲಸಾಧ್ಯವಾಗಿರಬೇಕು. ಸಹಜವಾಗಿಯೇ ಅವರು ಪ್ರತಿಧಾಳಿಯನ್ನು ಪ್ರಾರಂಭಿಸಿದ್ದಾರೆ. ಅದಕ್ಕೆ ಬಸವಣ್ಣ ಕೊಟ್ಟಿರುವ ಉತ್ತರ ಅಲ್ಲಿ ನೆರೆದಿದ್ದ ಶೂದ್ರರಲ್ಲಿ ಬಸವಣ್ಣನ ಬಗ್ಗೆ ಇನ್ನೂ ಹೆಚ್ಚಿನ ಆತ್ಮ ವಿಶ್ವಾಸವನ್ನು ತಂದು ಕೊಟ್ಟಿದೆ.

ಸೆಟ್ಟಿಯೆಂಬೆನೆ ಸಿರಿಯಾಳನ ?
ಮಡಿವಾಳನೆಂಬೆನೆ ಮಾಚಯ್ಯನ ?
ಡೋಹಾರನೆಂಬೆನೆ ಕಕ್ಕಯ್ಯನ ?
ಮಾದಾರನೆಂಬೆನೆ ಚನ್ನಯ್ಯನ ?
ಆಮರಾರುವನೆಂದರೆ ಕೂಡಲಸಂಗಯ್ಯ
ನಗುವನಯ್ಯ

ಹಾರುವನೊಬ್ಬ ಕೀಳುಜಾತಿಯವರನ್ನೆಲ್ಲಾ ಸಂಘಟಿಸತೊಡಗಿದ್ದಾನೆಂದು ಕಟಕಿಯಾಡಿದವರಿಗೆ ತಕ್ಕ ಉತ್ತರ. ಮುಂದುವರಿದು ಬಸವಣ್ಣ "ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವ ನೋಡಿ ಹಾರುವನಾದ. ವರ್ಣದಲ್ಲಿ ಜನಿಸಿದವರುಂಟೆ ?"ಎಂದು ನೇರವಾದ ಪ್ರಶ್ನೆ ಹಾಕುತ್ತಾನೆ. ವೃತ್ತಿ ಮತ್ತು ಜಾತಿಗಳಿಗೆ ಭೇದ ತೋರಿಸದೆ ಮಾಡಿದ ವರ್ಣಕ್ಕೆ ತಕ್ಕ ಪೆಟ್ಟು

ಕೊಡುತ್ತಾನೆ. ಆದರೆ ಬಸವಣ್ಣನದು ಒಂದು ರೀತಿಯ ಸಮನ್ವಯ ನೀತಿ. ಈ ರೀತಿ ದೋಷಾರೋಪಣೆ ಮಾಡುವವರ ಬಗ್ಗೆಯೂ ಅವನಿಗೆ ಮರುಕ. ಅಲ್ಲದೆ ತಾನು ಮೇಲು ಜಾತಿಯಲ್ಲಿ ಹುಟ್ಟಿ ನಾಯಕತ್ವವನ್ನು ಹಿಡಿದಿರುವೆನೆಂಬ ಅಳುಕೂ ಇದೆ.

ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ
ಕಷ್ಟತನದ ಹೊರೆಯ ಹೊರಿಸದಿರಯ್ಯಾ
ಕಕ್ಕಯ್ಯ ನೊಕ್ಕುದ ನಿಕ್ಕಿ ನೋಡಯ್ಯಾ
ದಾಸಯ್ಯ ಶಿವದಾನವನೆರೆಯ ನೋಡಯ್ಯಾ
ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ
ಉನ್ನತ ಮಹಿಮಾ ಕೂಡಲಸಂಗಮದೇವಾ

ಈ ಆತ್ಮ ವಿಮರ್ಶೆಯನ್ನೂ ಬಸವಣ್ಣ ಬೆಳಸಿಕೊಂಡದ್ದರಿಂದಲೇ ಅವನು ಎಲ್ಲರ ಆತ್ಮವಿಶ್ವಾಸಕ್ಕೆ ಪಕ್ಕಾಗುವುದಕ್ಕೆ ಸಾಧ್ಯವಾಯಿತು.

ಬಸವಣ್ಣನಿಗಿಂತ ಉಗ್ರವಾಗಿ ಮತ್ತು ನೇರವಾಗಿ ಬ್ರಾಹ್ಮಣರ ಮೇಲೆ ಟೀಕೆ ನಡೆದದ್ದು ಕಾಯಕಜೀವಿ ವಚನಕಾರರಿಂದ. ಇದಕ್ಕೆ ಅವರಿಗೆ ಪರಂಪರೆಯ ಕಾರಣವಿತ್ತು. ಶತಶತಮಾನಗಳಿಂದ ತಡೆಹಿಡಿದಿದ್ದ ರೋಷವನ್ನೆಲ್ಲಾ ಅವರು ಬ್ರಾಹ್ಮಣರ ಮೇಲೆ ಹರಿ ಬಿಟ್ಟಿರುವುದನ್ನು ಕಾಣಬಹುದು. ಅಲ್ಲದೆ ಅಂದೂ ಜಾತಿಯ ಅಸ್ತ್ರವನ್ನೇ ಪ್ರಬಲವನ್ನಾಗಿ ಮುಂದು ಮಾಡುತ್ತಿದ್ದ ಬ್ರಾಹ್ಮಣರನ್ನು ಕಂಡು ಅವರಿಗೆ ಹೇಸಿಗೆಯಾಗಿತ್ತು. ಆದ್ದರಿಂದ ಜಾತಿ ಮತ್ತು ಬ್ರಾಹ್ಮಣರು ಅವರ ಟೀಕೆಯ ವಸ್ತುಗಳಾದವು.

ವಚನಕಾರರಲ್ಲಿ ಹಿರಿಯವನಾದ ಮಾದಾರ ಚನ್ನಯ್ಯ "ಜಾತಿ ಗೋತ್ರಗಳೊಳಗೆ ನೀಚ, ಶ್ರೇಷ್ಠವೆಂಬ ಎರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿ ಎಂಬ ಕುಲವಿಲ್ಲ" ಎನ್ನುತ್ತಾನೆ. ಈ ಮಾತಿನಿಂದ ವಚನಕಾರರು ಗುಣಕ್ಕೆ ಅಥವಾ ಮೌಲ್ಯಕ್ಕೆ ಬೆಲೆ ಕೊಡುತ್ತಿದ್ದರೇ ವಿನಾ ಜಾತಿಗಲ್ಲ ಎಂಬುದು ಸ್ಪಷ್ಟವಾಗುತ್ತದೆ. ತನ್ನ ವಾದಕ್ಕೆ ಹಿಂದೆ ಆಗಿ ಹೋದ ಮಹಾಜ್ಞಾನಿಗಳನ್ನೂ ಬಳಸಿಕೊಳ್ಳುತ್ತಾನೆ. "ಸಾಂಖ್ಯ–ಸ್ವಪಚ; ಅಗಸ್ತ್ಯ ಕಬ್ಬಿಲ; ದೂರ್ವಾಸ–ಮಚ್ಚಿಗ; ದಧೀಚಿ–ಕೀಲಿಗ, ಕಶ್ಯಪ–ಕಮ್ಮಾರ; ರೋಮಜ-ಕಂಚುಗಾರ, ಕೌಂಡಿಲ್ಯನಾವಿಂದ; ಎಂದುದನರಿಯದೆ ಮತ್ತೆ ಕುಲವುಂಟೆಂದು ಹೋರುವೇತಕ್ಕೆ ?

ಮಾದಾರ ಚನ್ನಯ್ಯನ ಈ ಪ್ರಶ್ನೆ ಕರ್ಮಾಚಾರಗಳಲ್ಲಿ ನಿರತರಾದ ಜಾತಿವಾದಿಗಳ ಕಿವಿಗೆ ಹೋಗಲೆ ಇಲ್ಲ.

ಮಡಿವಾಳ ಮಾಚಯ್ಯ "ಮತಮತದ ದೂಷಣೆ ಯುಗಯುಗಾಂತರ ಬಂದ ವಾರ್ತೆ. ಅಲ್ಲಿ ಅಭಿಮಾನದ ಕಾರಣವೇನು ?" ಎಂದು ನಿರ್ಲಿಪ್ತನಾಗಿ ಕೇಳುತ್ತಾನೆ. ಶೂದ್ರರಲ್ಲಿ ಒಬ್ಬನಾಗಿದ್ದರೂ ಅವನಾಗಲೇ 'ಜಾತಿ' ಎಂಬುದು ನಿರರ್ಥಕವೆಂಬ ಮನೋಭಾವ ತಾಳುವ ಮಟ್ಟಕ್ಕೇರಿರುವುದನ್ನು ಗಮನಿಸಬಹುದು. ಕಲ್ಯಾಣದಲ್ಲಿ ಎಲ್ಲರೂ 'ಮಡಿವಾಳ ! ಮಡಿವಾಳ !' ಎಂದು ಕುಹಕದಿಂದ ನುಡಿದಾಗ 'ಜಗದ ಕೊಳೆಯ ತೊಳೆವ ಮಡಿವಾಳ' ನಾನೆಂದು ಉತ್ತರ ಕೊಡುತ್ತಾನೆ.

"ವಚನಕಾರರು ಕೆಳವರ್ಗದವರ ಆಶೋತ್ತರಗಳ ಬಗೆಗೆ ಚಿಂತಿಸಿ ವರ್ಣವ್ಯವಸ್ಥೆಯ ಸಂಕೋಲೆಯನ್ನು ಕಳಚಿ ವಿಶಾಲವಾದ ಮಾನವೀಯ ಮೌಲ್ಯಗಳನ್ನನುಸರಿಸಿ ನವಸಮಾಜದ ನಿರ್ಮಾಣಕ್ಕೆ ಕರೆಯಿತ್ತಾಗ, ತಮ್ಮ ಭವಿಷ್ಯದ ಉತ್ತಮಿಕೆಯನ್ನೂ, ತಮ್ಮ ಆತ್ಮೋದ್ಧಾರದ ಸೂಚನೆಯನ್ನೂ ತಮಗೆ ಒದಗಬಹುದಾದ ಸಾಮಾಜಿಕ ಪುರಸ್ಕಾರ ಹಾಗೂ ಭದ್ರ ನೆಲೆಯನ್ನೂ ಮುಂಗಂಡು ದಲಿತರೆಲ್ಲಾ ಅದಕ್ಕೆ ಓಗೊಟ್ಟರು. ವರ್ಗ–ವರ್ಣ–ಶೋಷಣೆ ರಹಿತವಾದ ಸಮಾಜ ನಿರ್ಮಾಣಕ್ಕೆ ಅವರು ಬಸವಾದಿ ಶರಣರೊಡನೆ ತ್ರಿಕರಣಪೂರ್ವಕವಾಗಿ ದುಡಿದರು. ಬಸವಣ್ಣನ ಮಾರ್ಗದರ್ಶನದಲ್ಲಿ ಅವರು ಜ್ಞಾನಪಥವನ್ನು ಕೈಗೊಂಡಿದ್ದನ್ನು ಚನ್ನಬಸವಣ್ಣ ಹೀಗೆ ಹೇಳುತ್ತಾನೆ.

ಹನ್ನೆರಡು ಗಾವುದ ವಿಸ್ತೀರ್ಣದ ಮಹಾ
ಪಟ್ಟಣಕ್ಕೆ ಕಲ್ಯಾಣವೆಂಬ ಪ್ರಣತಿ
ಆ ಪ್ರಣತಿಯಲ್ಲಿ ಮಥಹತ್ತೆಂಬ ಎಣ್ಣೆಯನೆರೆದು
ಜ್ಞಾನವೆಂಬ ಜ್ಯೋತಿಯ ಹೊತ್ತಿಸಿ ಒಪ್ಪುತಿದ್ದಿತಯ್ಯಾ, ಅಲ್ಲಿ ಕಾಳೆಯ್ಯ, ಚೌಡಯ್ಯ, ಕೋಲಶಾಂತಯ್ಯ ಮೊಗವಾಡದ ಕೇಶಿರಾಜಯ್ಯ, ಖಂಡೆಯ ಬೊಮ್ಮಣ್ಣ, ಖಂಡ ಮಲ್ಲಿನಾಥ, ಹಡಪದಪ್ಪಣ, ಮಡಿವಾಳ ಮಾಚಯ್ಯ, ಅಕ್ಕನಾಗಾಯಿಗಳು ಸಹಿತ ಇವರೆಲ್ಲರೂ ಸಂಗನ ಬಸವಣ್ಣನ ಬಯಲ ಕೂಡಿದರು.

ಇಲ್ಲಿ ಚೆನ್ನಬಸವ ಹೆಸರಿಸಿರುವವರೆಲ್ಲರೂ ದಲಿತರೇ. ಇವರೆಲ್ಲಾ ಬಸವಣ್ಣನ ಮಟ್ಟಕ್ಕೆ ಏರಿದವರೆಂಬ ಗೌರವ ಭಾವನೆಯಿದೆ. ಶೂದ್ರರಿಗೆ ಲಿಂಗಧಾರಣೆ ಮಾಡುವ ಪ್ರಯತ್ನ ಮೊದಲು ಆಯಿತೆಂದು ಹಿಂದೆಯೇ ತಿಳಿಸಿದೆ. ಇದು ಕೆಳವರ್ಗದ ಜನಕ್ಕೆ ಹೊಸದಾಗಿ ಕಂಡಿರಬೇಕು. ಲಿಂಗಧಾರಣೆಯಾದಾಗ ಅಥವಾ ಆದ ಮೇಲೆ ಅದಕ್ಕೆ ಅವರ ಪ್ರತಿಕ್ರಿಯೆಯೇನು ? ನಮಗೆ ತಿಳಿದಿರುವ ಹಲವು ವಚನಗಳ ಪ್ರಕಾರ ಅವರು ಲಿಂಗಕ್ಕೆ ವಿಧೇಯರಾಗಿ ಅದರ ಮೂಲಕವೆ ತಮ್ಮ ಅಭಿವ್ಯಕ್ತಿ ಮತ್ತು ಮುಕ್ತಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದರೆಂಬುದು ಬ್ರಾಹ್ಮಣರಿಗೆ ಗಾಯಿತ್ರಿಯಿದ್ದಂತೆ ಇವರಿಗೆ 'ನಮಃಶಿವಾಯ' ಎಂಬ ಮಂತ್ರವನ್ನೂ ಬೋಧಿಸಲಾಯಿತು. ಆದರೆ ಇದನ್ನೆಲ್ಲಾ ಸ್ವೀಕರಿಸುವಾಗ ಅವರ ಮನೋಸ್ಥಿತಿ ಹೇಗಿತ್ತು ? ಅಳುಕು ಇತ್ತೆ ಅಥವಾ ಅನುಭವದ ಹಿನ್ನೆಲೆಯಲ್ಲಿ ನಿಷ್ಪ್ರಯೋಜಕವಾಗಿ ಕಂಡಿತೇ. ನಗೆಯ ಮಾರಿತಂದೆ ಎಂಬ ವಚನಕಾರ ಇದಕ್ಕೆ ಸಮರ್ಥ ಉದಾಹರಣೆಯೊದಗಿಸುತ್ತಾನೆ.

ಎನ್ನ ಕೈಯಲ್ಲಿ ಕೊಟ್ಟುದ ದೇವರೆಂದಿದ್ದೆ.
ಇದು ಮೆಲ್ಲ ಮೆಲ್ಲನೆ ಕಲ್ಲಾಗಿ ಬರುತ್ತಿದೆ.
ಇದನಾಲೊಲ್ಲೆ.
ಬಲ್ಲವರು ಹೇಳಿ, ಉಂಬುಡೆ ಬಾಯಿಲ್ಲ
ನೋಡುವಡೆ ಕಣ್ಣಿಲ್ಲ
ಎನ್ನ ಬಡತನಕ್ಕೆ, ಬೇಡುವಡೆ ಏನೂ ಇಲ್ಲ ॥

ನಗೆಯ ಮಾರಿತಂದೆಯ ಈ ಪ್ರಾಮಾಣಿಕ ಮಾತು ಕಟುವಾಸ್ತವತೆಯನ್ನು ಹೇಳುವುದರ ಜೊತೆಗೆ ಬಡತನದ ಪ್ರಮುಖ ಸಮಸ್ಯೆಯನ್ನೂ ಎತ್ತುತ್ತದೆ. ಲಿಂಗವನ್ನು ದೇವರೆಂದು ಒಪ್ಪಿಕೊಳ್ಳದ ಅವನ ಆ ಮನಸ್ಥಿತಿಯ ಹಿಂದೆ ಬಡತನದ ಛಾಯೆ ಜೊತೆಗೆ ವಾಸ್ತವತೆ ತಲೆಹಾಕಿದೆ. ಆದರೆ ಕ್ರಮೇಣ ಆ ಕಲ್ಲನ್ನು ದೇವರೆಂದು ಅವರು ಒಪ್ಪಿಕೊಳ್ಳುವ ಸ್ಥಿತಿಗೆ ಬಂದದ್ದು ಬ್ರಾಹ್ಮಣರ ವಿರುದ್ಧದ ಸಂಘಟನೆಯಿಂದಾಗಿ ಎಂದು ಅನಿಸುತ್ತದೆ.

ಬ್ರಾಹ್ಮಣರ ಬಗ್ಗೆ, ಅವರ ಡಾಂಭಿಕತೆಯ ಬಗ್ಗೆ ಮತ್ತು ಅವರ ಜಾತಿ ದ್ವೇಷದ ಬಗ್ಗೆ ಈ ವಚನಕಾರರು ಹೇಳುವುದನ್ನು ನೋಡಿ ಸೊಡ್ಡಳ ಬಾಚರಸನೆಂಬ ವಚನಕಾರ.

"ಬ್ರಾಹ್ಮಣನೆ ಅಧಿಕವೆಂದೆಂಬಿರಿಭೊ, ಆ
ಪಾತದುಮಿಥ್ಯ
ವರ್ಣಾನಾಂ ಬ್ರಾಹ್ಮಣೋದೈವ'
'ವರ್ಣಾನಾಂ ಬ್ರಾಹ್ಮಣೋ ಗುರುಃ' ಎಂಬ
ಶೃತಿಯನರಿದು ದ್ವಿಜರು ತಾವು ಗುರುವೆಂಬ
ಪರಿಯ ನೋಡಾ
ಗುರುವಾದೊಡೆ ಗುರುತನದ ಲಕ್ಷಣ ಬೇಡಾ
ಗುರುವಾದೊಡೆ ಸಕಲವನು ಕೂಡಿಕೊಂಡಿರ
ಬೇಡಾ ॥
ತಾವು ಗುರುವಾದೊಡೆ ಕುಲ ಅಕುಲಗ
ಳುಂಟೆ ?
ಎಂತು ಕುಲದೊಳಗೆ ಇದ್ದು ಆ ಕುಲದ
ಮಾತಾಡುವ ದ್ವಿಜ ಭ್ರಮಿತರೇನೆಂಬ
ಸೊಡ್ಡಳಾ ॥

ದ್ವಿಜರ ಟೊಳ್ಳುತನವನ್ನು ಭ್ರಮೆಯನ್ನೂ ಸೊಡ್ಡಳ ಮೇಲಿನ ವಚನದಲ್ಲಿ ಸಮರ್ಥವಾಗಿ ಚಿತ್ರಿಸಿದ್ದಾನೆ. ಈ ಜನಗಳ ಶುಷ್ಕತನವನ್ನು ಕಂಡ ಹಾವಿನ ಹಾಳ ಕಲ್ಲಯ್ಯನೆಂಬ ವಚನಕಾರ ಬ್ರಾಹ್ಮಣರು ದ್ವಿಜರಲ್ಲ. ನಾವು ಶೂದ್ರರು ದ್ವಿಜರು ಎಂಬ ಆತ್ಮಪ್ರತ್ಯಯದ ಮಾತಾಡುತ್ತಾನೆ.

> ಜಾತಿಯಲ್ಲಿ ಅಧಿಕವೆಂದು ನುಡಿವರು ವಿಪ್ರ ಜನರು
> ಸ್ವಪಚ, ಮಚ್ಚಿಗ, ಬೋಯ ಕುಲಜರೆ ದ್ವಿಜರು
> ಅಗಸ, ಕಮ್ಮಾರ, ನಾವಿದ ಕು ಲ ಜ ರೆ ದ್ವಿಜರು

'ದ್ವಿಜರಾಗುವ ತಮ್ಮ ಕರ್ಮದಿಂದ ವಂಚಿತರಾಗಿದ್ದಕ್ಕೆ ವ್ಯಥೆಪಡದೆ ಸಂಸ್ಕಾರದಿಂದ ತಾವು ದ್ವಿಜರಾದದ್ದನ್ನು ಸಮರ್ಥವಾಗಿ ಧ್ವನಿಸಿದ್ದಾನೆ.

ಬ್ರಾಹ್ಮಣರ ಕಡೆ ತಿರುಗಿದ ವಚನಕಾರರ ಟೀಕೆ ಸಹಜವಾಗಿಯೇ ಅವರು ನಂಬಿದ ಧರ್ಮ, ವೇದ, ಶಾಸ್ತ್ರ, ಪುರಾಣಗಳ ಕಡೆಯೂ ತಿರುಗಿತು. ಅವರ ತರ್ಕಹೀನ ವಾದಗಳು ಇವರಿಗೆ ಲೇವಡಿಯ ವಸ್ತುಗಳಾದವು. ಮಡಿವಾಳ ಮಾಚಯ್ಯನಿಗೆ

> ವೇದ ವಿಪ್ರರ ಬೋಧೆ ಶಾಸ್ತ್ರ ಸಂತೆಯ ಮಾತು ಪುರಾಣ ಪುಂಡರ ಗೋಷ್ಠಿ, ಆಗಮ ಅನೃತದ ನುಡಿ ತರ್ಕ ವ್ಯಾಕರಣ ಕವಿತ್ವ ಪ್ರೌಢಿ. ಇಂತಿವರಂಗದ ಮೇಲೆ ಲಿಂಗವಲ್ಲದ ಭಾಷೆ.

ಆಗಿ ಕಂಡಿದೆ. ಲಿಂಗವನ್ನು ವಿಪ್ರರಿಗೆ ಪ್ರತಿ ಅಸ್ತ್ರವಾಗಿ ಮಾಚಯ್ಯ ಬಳಸಿದ್ದಾನೆ. 'ಯಜ್ಞೋಪವೀತ' ಇಲ್ಲದವ ಶೂದ್ರನೆಂದು ಪರಿಗಣಿಸಲ್ಪಟ್ಟ ಎಂದು ಅಂಬೇಡ್ಕರ್ ಹೇಳುವ ಮಾ ತಿ ಗೂ ಮಾಚಯ್ಯ ಲಿಂಗವಿಲ್ಲದ ಭಾಷೆ ವಿಪ್ರರ ಚಟುವಟಿಕೆ ಎನ್ನುವುದಕ್ಕೂ ಆಕಸ್ಮಿಕ ಎನ್ನಬೇಕೆ? ಇರಬಹುದು. ಆದರೆ ಬ್ರಾಹ್ಮಣ ಪರಂಪರೆ ಸೃಷ್ಟಿಸಿರುವ ಸಾಹಿತ್ಯವೆಲ್ಲವೂ. ಅಬ್ರಾಹ್ಮಣ ವಿದ್ವಾಂಸನಿಗೆ ತರ್ಕಶೂನ್ಯ ಕಗ್ಗಗಳಾಗಿ ಕಾಣುತ್ತವೆ ಎಂಬ ಅಂ ಬೇ ಡ್ಕ ರ್ ಮಾತನ್ನು ಮೇಲಿನ ವಚನ ಸ್ಥಿರಪಡಿಸುತ್ತದೆ.

ಕಲ್ಯಾಣದಲ್ಲಿದ್ದ ಶೂದ್ರ ವಚನಕಾರರಲ್ಲೆಲ್ಲ ನೇರ,ನಿಷ್ಠುರ ಮತ್ತುವ್ಯಂಗ್ಯಕ್ಕೆ ಹೆಸರಾದವನೆಂದರೆ ಅಂಬಿಗರ ಚೌಡಯ್ಯ. ಬ್ರಾಹ್ಮಣರ ಬೂಟಾಟಿಕೆಯನ್ನು ಎಷ್ಟು ಸಮರ್ಥವಾಗಿ ಮತ್ತು ಅಷ್ಟೇ ವ್ಯಂಗ್ಯವಾಗಿ ಸಮರ್ಥಿಸಿದ್ದಾನೆಂಬುದಕ್ಕೆ ಕೆಳಗಿನ ವಚನ ಸಾಕ್ಷಿ.

> ಬ್ರಹ್ಮನ ನಾವು ಬಲ್ಲೆವು, ವಿಷ್ಣುವ ನಾವು ಬಲ್ಲೆವು.
> ತೆತ್ತೀಸಕೋಟಿ ದೇವತೆಗಳ ನಾವು ಬಲ್ಲೆವು.
> ಅದೇನು ಕಾರಣವೆಂದೆಡೆ
> ಇವರು ಹಲವು ಕಾಲ ನಮ್ಮ ಸೆರೆಮನೆಯಲ್ಲಿದ್ದವರಾಗಿ
> ಇವರು ದೇವರೆಂಬುದ ನಾ ಬಲ್ಲೆ !

ಈ ವ್ಯಂಗ್ಯ, ಕಟಕಿಯೂ ಸಹ ಅಂದಿನ ಬ್ರಾಹ್ಮಣ ಸಮಾಜಕ್ಕೆ ತಾಗಿರಲಿಲ್ಲವೆ ? ಖಂಡಿತ ಮುಟ್ಟಿರಬೇಕು. ಆತ್ಮ ವಿಮರ್ಶೆಯ ಸ್ವಬುದ್ಧಿಯನ್ನು ಕಳೆದುಕೊಂಡವರಿಗೆ ಇದು ಹೆಚ್ಚು ದ್ವೇಷ ಸಾಧಿಸುವುದಕ್ಕೆ ಅನುವು ಮಾಡಿಕೊಟ್ಟಿರಬಹುದು. ಆದರೆ ಚೌಡಯ್ಯ ಬರೀ ಬ್ರಾಹ್ಮಣರನ್ನೇ ದೂಷಿಸಿಲ್ಲ. ಲಿಂಗವಂತರಾದೆವೆಂದು ಭ್ರಮಿಸಿ, ಲಿಂಗಧಾರಣೆಯಡಿ ಏನೂ ಬೇಕಾದರೂ ಮಾಡಬಹುದೆಂದು ತಿಳಿದ ವಚನಕಾರರನ್ನು ತೀಕ್ಷ್ಣವಾಗಿ ಟೀಕಿಸಿದ್ದಾನೆ. ಸ್ವಚ್ಛ, ಶೀಲವಂತ ಸಮಾಜ ರಚನೆಯ ಸ್ವರೂಪ, ನೋಡಲೆತ್ನಿಸಿದ ಈ ಶೂದ್ರನಿಗೆ ಶರಣರಾದವರು ಮಾಡಿದ ಮೋಸವನ್ನು ಕಂಡು ತಡೆಯಲಾಗಲಿಲ್ಲ. ಈ ಕೆಳಗಿನ ವಚನದಲ್ಲಿ ಅವನ ಕೋಪ ಪರಮ ವಿರಕ್ತರೆಂದು ಹೇಳಿ ಮೋಸ ಮಾ ಡು ವ ವ ರ ಮೇಲೆ ಹರಿಹಾಯ್ದಿರುವುದನ್ನು ಗಮನಿಸಬೇಕು.

> ಅಯ್ಯಾ, ನಾವು ಪರಮ ವಿರಕ್ತರೂ
> ಪಟ್ಟದ ಅಯ್ಯನವರು,ಚರಮಮೂರ್ತಿಗಳು ಪರದೇಶಿಗಳು ಎಂದು
> ಶಂಖ,ಗಿಳಿಲು, ದಂಡಾಗ್ರ ಎಂಬ ಬಿರುದು
> ಹಿಡಿದು ಕಾವಿ ಕಾಷಾಯಾಂಬರವ ಹೊತ್ತು
> ಸರ್ವಕಾರ್ಯದಲ್ಲಿ ಶ್ರೇಷ್ಠರೆಂದು ಗರ್ವದಲ್ಲಿ
> ಕಾಮನಾಟದಲ್ಲಿ ಕಲಕಿ, ಮನಸಿನಲಿ ದುರ್ಗಣವನ್ನಿಟ್ಟುಕೊಂಡು
> ಮಾತಿನಲ್ಲಿ ನೀತಿಯ ಸೇರಿಸುತ್ತ ಕಪಟದಲ್ಲಿ
> ಚರಿಸುತ್ತ ತೊನ್ನ ಹೊಲೆ ಮಾದಿಗರ ಸಂಗ
> ಮಾಡಲಾಗದು ಅವರ ಪ್ರಸಂಗವ ಕೇಳಲಾಗದು
> ಅದೇನು ಕಾರಣವೆಂದೆಡೆ
> ಗುರುಲಿಂಗ ಜಂಗಮವಾದ ಬಳಿಕ
> ಅಷ್ಟಾವರಣದಲ್ಲಿ ನಿಷ್ಠಾಪರರಾಗಿರಬೇಕು
> ಪರಧನ ಪರಸತಿಯರ ಹಿಡಿಯುವೆಂಬ ನೇಮದಲ್ಲಿ ಬಲ್ಲಿದರಾಗಿರಬೇಕು
> ಶಿವಭಕ್ತರಾದವರ ಭವವ ಗೆಲಿಸಿ ಮೋಕ್ಷವ ಹೊಂದಿಸಬೇಕು
> ಶಿವಲಾಂಛನವ ಹೊತ್ತ ಬಳಿಕ ಶಿವನಂತಿರಬೇಕು
> ಬರಿದೆ, ನಾನು ಮಹೇಶ್ವರನೆಂದು, ನಾನು ಶಿವಭಕ್ತನೆಂದು
> ತನ್ನ ಹೃನ್ಮಂದಿರದಲ್ಲಿ ನೆಲಸಿದ ಚಿನ್ಮಯ ಜಂಗಮ ಲಿಂಗಕ್ಕೆ
> ತನು–ಮನ–ಧನವೆಂಬ ತ್ರಿವಿಧ ಪದಾರ್ಥ ಪಸರ್ಪಿಸಿ
> ತ್ರಿವಿಧ ಪ್ರಸಾದವೆ ಗರ್ಭೀಕರಿಸಿಕೊಂಡು ಪ್ರಸನ್ನ ಪ್ರಸಾದನ ಸ್ವೀಕರಿಸಿ
> ಪರತತ್ವ ಪ್ರಸಾದದಲ್ಲಿ ತಾನು ತಾನಾಗಲರಿಯದೆ
>
> ಉಚ್ಚಂಗಿ ದುರ್ಗಿಗೆ ಬಿಟ್ಟ ಪೋತರಾಜನಂತೆ
> ಮೂರು ಮೂರು ಜಡೆಗಳ ಬಿಟ್ಟು
> ಅಡಿನೊಳಗಿರುವ ಹಿರಿಯ ಹೋತಿನಂತೆ
> ಮೊಳ ಮೊಳ ಗಡ್ಡವ ಬಿಟ್ಟು
> ಡೊಂಬ ಜಾತಿಗಾರನಂತೆ ವೇಷವತೊಟ್ಟು
> ಮೀಸೆಯ ಬೋಳಿಸಿಕೊಂಡು, ಕೈವಷಧರಿಸಿ
> ಸಂಸ್ಕೃತ. ಗೀರ್ವಾಣ ಭಾಷೆಯ ಕಲಿತು
> ಕಾಕ, ಕುಟಿಲ, ಕುಹಕದ ಗಾಳಿಪೂಜೆಯಿಂದ
> ಬಂದ ಸುಡುಗಾಡು ಸಿದ್ಧಯ್ಯಗಳಂತೆ
> ಗಿಡ ಮೂ ಲಿ ಕೆ ಗ ಳು, ತಂತ್ರ ಮಂತ್ರ,
> ಯಂತ್ರದ ಭಾಷೆ ಕಲಿತುಕೊಂಡು ಪುರುಜನರ ಮೆಚ್ಚಿಸಲೇಬೇಕೆಂದು
> ಅಯ್ಯಾ,ನಾವು ಕೆರೆ ಭಾವಿಯತೆಗೆಸಬೇಕೆಂದು
> ಮಠ ಗುಡಿಯ ಕಟ್ಟಿಸಬೇಕೆಂದು
> ಮಾನ್ಯದಲ್ಲಿ ಬಿಲ್ವ ಗಿಡಗಳ ಹಚ್ಚಬೇಕೆಂದು
> ಮದುವೆ ಅಯ್ಯಾಚಾರವ ಮಾಡಬೇಕೆಂದು
> ಅನ್ನಕ್ಷೇತ್ರ ಅರವಟ್ಟಿಗೆಯ ಇಡಿಸಬೇಕೆಂದು
> ಪುರಾಣಗಳ ಹಚ್ಚಿಸಬೇಕೆಂದು
> ಇಂತಪ್ಪ ದುರಾಸೆಯ ಮುಂದುಗೊಂಡು ನಾನಾ ದೇಶವ ತಿರುಗಿ
> ಅರಸರ ಮದದಂತೆ ಗರ್ವದಿಂದ ಹೆಚ್ಚಿ
> ಹೇಸಿ ಹೊಲೆ ಮಾದಿಗರ ಕಾಡಿಬೇಡಿ
> ಹುಸಿಯದೆ ಬೊಗಳಿ ಒಬ್ಬನ ಒಲವ ಮಾಡಿಕೊಂಡು
> ವ್ಯಾಪಾರ ಮರ್ಯಾದೆಯಲ್ಲಿ ಪೇಟೆಯಲ್ಲಿ ಕುಳಿತು ಅನಂತ ಮಾತುಗಳನ್ನಾಡುತ್ತಾ
> ಸೆಟ್ಟಿ ಮುಂತಾದ ಅನಂತ ಕಳ್ಳ ಹಾದರಗಿತ್ತಿಯ ಮಕ್ಕಳ ಮಾತಿನಿಂದೊಲಿಸಿ
> ಅವರು ಕೊಟ್ಟಡೆ ಹೊಗಳಿ, ಕೊಡದಿರ್ದಡೆ ಬೊಗಳಿ
> ಆ ಭ್ರಷ್ಟ ಹೊಲೆ ಮಾದಿಗರು ಕೊಟ್ಟ ದ್ರವ್ಯಗಳ ತೆಗೆದುಕೊಂಡು ಬಂದು

ಕಡೆಗೆ ಚೋರರು ಒಯ್ದರೆಂದು ಮಠದೊಳಗೆ ಮಡಗಿಕೊಂಡು
ಪರಸ್ತ್ರೀಯ ಹಡಕಿ ಯೋನಿಯೊಳಗೆ
ಇಂದ್ರಿಯ ಬಿಟ್ಟು ಕಾಮ ಕ್ರೋಧದಲ್ಲಿ
ಮುಳುಗಿ ಮತಿಗೆಟ್ಟು ಶಿವಪಥಕ್ಕೆದೂರಾಗಿ,
ದುರಾಚಾರವ ಆಚರಿಸಿ ನಡೆನುಡಿಗಳ
ಹೊರ್ತಾಗಿ, ವ್ಯರ್ಥ ಹೊತ್ತುಗಳೆದು
ಸತ್ತು ಹೋಗುವ ಜಡದೇಹಿ ಕಡುಪಾತಕರ ಕತ್ತೆ ಹಡಿಕಲಿಗೆ
ಪರಮ ನಿರಂಜನ ಜಂಗಮಲಿಂಗದೇವರೆಂದು ಕರೆತಂದು
ಪಾದತೀರ್ಥ ಪ್ರಸಾದವ ತೆಗೆದುಕೊಂಬ ಜರಿಗೆ
ಇಪ್ಪತ್ತೊಂದು ಯುಗ ಪರಿಯಂತರ ನರಕ ಕೊಂಡದಲ್ಲಿಕ್ಕುವ
ಇಂತಪ್ಪ ಜಂಗಮನ ಪೂಜೆ ಮಾಡುವಂತಹ ಶಿವಭಕ್ತನ
ಉಭಯತರ ಮೂಗು ಸೀಳಿ ಮೆಣಸಿನಹಿಟ್ಟು ತುಂಬಿ
ಪಡಿಹಾರಿಉತ್ತಣ್ಣಗಳೆಡದ ಪಾದುಕೆಯಿಂದ
ಪಡಪಡನೆ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ.

ಈ ವಚನ ಯಾವ ವಿವರಣೆಯನ್ನೂ ಆಪೇಕ್ಷಿಸುವುದಿಲ್ಲ. ಲಿಂಗವಂತರಾಗಿ ಶಿವಭಕ್ತರೆನಿಸಿಕೊಂಬವರು ಮಾಡುವ ದುರಾಚಾರಗಳು ಇಲ್ಲಿ ಚೌಡಯ್ಯನ ನೇರ ಟೀಕೆಗೆ ಒಳಗಾಗಿವೆ. ಬಹುಶಃ ಇಲ್ಲಿ ಚಿತ್ರತರಾಗಿರುವ ಲಿಂಗವಂತರಂಥವರಿಂದಾಗಿಯೇ ವಚನಕಾರರ ಚಳುವಳಿ ಅಲ್ಲಿಗೇ ನಿಲ್ಲಬೇಕಾಯ್ತು. ಬಸವಣ್ಣ ನೇರವಾಗಿ ಟೀಕಿಸಲಾಗದ್ದನ್ನು ಚೌಡಯ್ಯ ಯಶಸ್ವಿಯಾಗಿ ಮಾಡಿದ್ದಾನೆ. ಹೊಲೆ ಮಾದಿಗರು ತಾವಲ್ಲ, ಶಿಷ್ಟಾಚಾರವಿಲ್ಲದವರು ಎಂಬುದನ್ನು ಪ್ರತಿಪಾದಿಸಿದ್ದಾನೆ. ಬಹುಶಃ ಉಚ್ಚ ಜಾತಿಯಿಂದ ಬಂದ ಲಿಂಗವಂತರೇ ಈ ರೀತಿಯ ದ್ರೋಹದಲ್ಲಿ ತೊಡಗಿರಬೇಕು. ಮಠಮಾನ್ಯಗಳನ್ನು ಕಟ್ಟಿ ಹಣ ಸಂಗ್ರಹ, ಪರಸ್ತ್ರೀ ವ್ಯಾಮೋಹಗಳಲ್ಲಿ ತೊಡಗಿರಬೇಕು. ಬ್ರಾಹ್ಮಣರಿಗಿಂತ ಯಾವ ರೀತಿಯಲ್ಲೂ ಬೇರೆ ಎನಿಸದ ಇವರನ್ನು ಕಂಡು ಚೌಡಯ್ಯ ಉರಿದು ಬಿದ್ದಿದ್ದಾನೆ. ತಮ್ಮ ಸಮಾನತಾ ಸಮಾಜದ ನಿರ್ಮಾಣದಲ್ಲಿ ಸಂಘಟನೆ ಇಂಥವರಿಂದ ಹುಸಿಯಾಗಬಾರದೆಂಬ ಕಳಕಳಿ ಅವನ ಸಿಟ್ಟಿನ ಹಿಂದೆ ಇದೆ. ಮೇಲೆ ಚಿತ್ರಿಸಿದಂತಹ ಜಂಗಮರ ವ್ಯಕ್ತಿತ್ವಕ್ಕೆ ವಿರುದ್ಧವಾಗಿ ಚೌಡಯ್ಯ ಮೋಳಿಗೆ ಮಾರಯ್ಯನ ಚಿತ್ರಣ ಕೊಡುತ್ತಾನೆ.

ಶಿವಭಕ್ತರ ಮನೆಗೆ ಹೋಗಿ ಒರಳಕ್ಕಿಯ ನಾಯ್ದು ತಂದು
ಲಿಂಗಕ್ಕೆ ಬೋನವ ಮಾಡಿ ಜಂಗಮಕ್ಕೆ ನೀಡಿ
ಒಕ್ಕುಡ ಕೊಂಡವ ಹೋಹನೈ ಕೈಲಾಸಕ್ಕೆ।

ಎನ್ನುವಲ್ಲಿ ತನ್ನ ಕುಲಮಾನದಿಂದಲೇ ಬಂದ ವ್ಯಕ್ತಿಯ ಬಗ್ಗೆ ಇರುವ ಅಭಿಮಾನ, ಮೆಚ್ಚಿಗೆಯನ್ನು ಗಮನಿಸಬೇಕು. ಶೀಲವಂತರು, ಶೀಲವಂತರು ಎಂದು ಆಚರಿಸುವ ಅಣ್ಣಗಳೇ ನಿಮ್ಮ ಶೀಲವಾವುದು? ಎಂದು ಕೇಳುವ ಚೌಡಯ್ಯನಂಥ ಶೂದ್ರರು ಅಂದು ಸಂಘಟಿತರಾದ್ದರಿಂದಲೇ ಬಸವಣ್ಣನಂಥವನು ಸಾಮಾಜಿಕ ಕ್ರಾಂತಿಯಲ್ಲಿ ಕೈಹಾಕಲು ಸಾಧ್ಯವಾದದ್ದು.

ಹುಟ್ಟು ಸಾವು ಆಕಸ್ಮಿಕವೆಂದು ತಿಳಿದವರು ವಚನಕಾರರು. ಬೆಳೆ ಬೆಳೆಯುತ್ತಾ ತಾವು ರೂಢಿಸಿಕೊಂಡ ಗುಣಗಳಿಂದಾಗಿ ವರ್ತನೆಗಳಿಂದಾಗಿ ಸ್ವಭಾವ ಬದಲಾಗುತ್ತದೆಂದು ತಿಳಿದವರು. ಹುಟ್ಟಿನಿಂದ ಜಾತಿಯಿಲ್ಲ, ಕುಲವಿಲ್ಲ ಎಂದು ಕೇಳುವ ಮಾದಾರ ಚೆನ್ನಯ್ಯ ವರ್ಣಾಶ್ರಮ ಧರ್ಮವನ್ನು ಎಷ್ಟು ಸರಳವಾಗಿ ವಿವೇಚಿಸುತ್ತಾನೆ.

ವೇದ ಶಾಸ್ತ್ರಕ್ಕೆ ಹಾರುವನಾಗಿ
ವೀರ ವಿತರಣಕ್ಕೆ ಕ್ಷತ್ರಿಯನಾಗಿ
ಸರ್ವವನಾರೈದು ನೋಡುವಲ್ಲಿ ವೈಶ್ಯನಾಗಿ ವ್ಯಾಪಾರದೊಳಗಾಗಿ
ಕೃಷಿಯ ಮಾಡುವುದಕ್ಕೆ ಶೂದ್ರನಾಗಿ
ಇಂತೀ 'ಜಾತಿಗೋತ್ರನೊಳಗಾದ ನೀಚ ಶ್ರೇಷ್ಠವೆಂಬ
ಎರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿಯೆಂಬ ಕುಲವಿಲ್ಲ
ಬ್ರಹ್ಮವನರಿದಲ್ಲಿ ಬ್ರಾಹ್ಮಣ
ಸರ್ವ ಜೀವ ಹಿತಕರ್ಮಕ್ಕೊಳಗಾದಲ್ಲಿ ಸಮಗಾರ

ಅಂತ್ಯಜನೆಂದು ವಿಪ್ರರು ಹೀಯಾಳಿಸಿದವ ನೀಡಿದ ವಿಶ್ಲೇಷಣೆ ಇದು. 'ಗುಣಕರ್ಮ ವಿಭಾಗಶಃ' ಎಂದು ಹೇಳುವ ಗೀತೆ ಬೆಂಬಲಿಸಿದ್ದು ಚಾತುರ್ವರ್ಣ್ಯಗಳನ್ನು. ಆದರೆ ಗುಣಮಟ್ಟವನ್ನೇ ಮಾನದಂಡವನ್ನಾಗಿಟ್ಟುಕೊಂಡು ಚೆನ್ನಯ್ಯ ಹೇಳುವುದು ಎರಡೇ ಕುಲವನ್ನು ಮುಂದುವರಿದು "ನಡೆನುಡಿಸಿದ್ಧಾಂತವಾದಲ್ಲಿ ಕುಲಹೊಲೆ ಸೂತಕವಿಲ್ಲ. ನುಡಿ ಲೇಸು ನಡೆಯಧಮವಾದಲ್ಲಿ ಅದೆ ಜಿಡುಗಡೆ ಇಲ್ಲದ ಹೊಲೆ" ಎನ್ನುತ್ತಾನೆ, ನಡೆನುಡಿ ಸಿದ್ಧಾಂತವಾಗಬೇಕು ಎನ್ನುವುದು ಸರಳವಾದ ಮಾತಲ್ಲ. ಅದನ್ನು ಮಾಡಿ ತೋರಿಸಿದವರು ವಚನಕಾರರು. ಆ ರೀತಿಯ ಧೀಮಂತಿಕೆ ಇದ್ದದರಿಂದಲೇ ಬ್ರಾಹ್ಮಣರೆಂದು ಬೀಗುತ್ತಿದ್ದವರಿಗೆ ವೀರಶಂಕರ ದಾಸಯ್ಯನೆಂಬ ವಚನಕಾರ "ನಿಮ್ಮಿಂದ ಏಳುಬೆಲೆ ಹೊರಗಾದ ಹೊಲೆಯನೆ ಉತ್ತಮ, ಕುಲಜನೆಂದು ಮುಡಿಗೆಯ ಹಾಕಿದೆನು. ಎತ್ತಿರೋ ಸತ್ಯ ಉಳ್ಳಡೆ ಅಲ್ಲದಡೆ ನಿಮ್ಮ ಬಾಯ ಮುಚ್ಚಿಕೊಳ್ಳಿ" ಎಂಬ ಸವಾಲನ್ನೆಸೆಯಲು ಸಾಧ್ಯವಾದದ್ದು.

ವಚನಕಾರರು ಮೇಲ್ವರ್ಗದವರ ವಿರುದ್ಧ ಸಂಘಟಿತರಾಗುವ ಹಂತದಲ್ಲಿ ಅಲ್ಲಿಯವರೆಗೆ ಕಡೆಗಣಿಸಲ್ಪಟ್ಟಿದ್ದ ಮಹಿಳೆಗೆ ವಿಶೇಷ ಮಾನ್ಯತೆ ನೀಡಿದ್ದು ಅವರ ಸಂಘಟನೆ ಬಲಗೊಳ್ಳಲು ಅನುಕೂಲವಾಯಿತು. ವರ್ಣಾಶ್ರಮ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಸಮಾನ ಸ್ಥಾನವನ್ನು ಗಂಡಸು ಕೊಟ್ಟಿರಲಿಲ್ಲ. ಅವರನ್ನು ಭೋಗವಸ್ತುಗಳೆಂದು ತಿಳಿದು ಶೂದ್ರರ ಸ್ಥಾನದಲ್ಲಿಡಲಾಗಿತ್ತು. ಅನುಕೂಲಕ್ಕೊಬ್ಬ ಮೈತ್ರಿ ಗಾರ್ಗೇಯಿಗಳನ್ನು ಸೃಷ್ಟಿಸಿಕೊಂಡು ಅಷ್ಟರಲ್ಲೇ ಸಂತೃಪ್ತರಾದರು. ಹೆಣ್ಣಿನ ಸ್ಥಿತಿ ಸಮಾಜದಲ್ಲಿ ಹೇಗಿತ್ತೆಂಬುದನ್ನು ನೀಲಮ್ಮನೆಂಬ ಶರಣೆ ಹೀಗೆ ಚಿತ್ರಿಸಿದ್ದಾಳೆ. "ಏಕೆನ್ನ ಪುಟ್ಟಿಸಿದೆಯಯ್ಯಾ ಹೆಣ್ಣು ಜನ್ಮದಲ್ಲಿ ಪುಣ್ಯವಿಲ್ಲದ ಪಾಪಿಯ? ನಾನು ಇಹಪರಕ್ಕೆ ದೂರಳಯ್ಯಾ"ಎಂದು ಅಂದರೆ ತಾನು ಇಲ್ಲಿ ಮತ್ತು ಅಲ್ಲಿ ಎಲ್ಲಿಯೂ ಸಲ್ಲದವಳು ಎಂಬ ಅನಾಥ ಸ್ಥಿತಿ. ಶೂದ್ರರಷ್ಟೇ ಕಳವಳಕಾರಕ ಬದುಕು. ಇಂಥ ಭೇದ ಭಾವಗಳನ್ನು ಮುರಿದು, ಈ ಭೇದಗಳು ಬಾಲಭಾವ ಎಂಬ ಚಿಂತನೆಯನ್ನು ಬೆಳೆಸಿಕೊಂಡರು. ಚಂದಿಮರಸನೆಂಬ ವಚನಕಾರ 'ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ,ಸ್ತ್ರೀಪುನ್ನಕಾದಿ ಜಾತಿ ಪ್ರತ್ಯೆಯಂಗಳುಬಾಲಭಾವದೊಳೆಂ ತಂದೆ"ಎನ್ನುತ್ತಾನೆ. ಶರಣರು ಮಹಿಳೆಯರಿಗೆ ಸರ್ವ ಸ್ವತಂತ್ರ್ಯವನ್ನು ನೀಡುವುದರ ಜೊತೆಗೆ ಆತ್ಮ ವಿಶ್ವಾಸವನ್ನು ತಂದುಕೊಟ್ಟರು. ಅಂಥ ಅವಕಾಶ ನೀಡಿದ್ದಕ್ಕಾಗಿಯೇ ಅಕ್ಕಮಹಾದೇವಿಯಂಥ ವಚನಕಾರ್ತಿ ಮೂಡಿಬರಲು ಸಾಧ್ಯವಾಯಿತು. ಜಾತಿ ಭೇದವಿಲ್ಲದೆ, ಲಿಂಗಭೇದವಿಲ್ಲದೆ ಸಂಘಟನೆ ಇಲ್ಲಿ ಬೆಳೆದದ್ದು ಗಮನಾರ್ಹ.

ಬಸವಣ್ಣ ವಿವಿಧ ವೃತ್ತಿ ಮೂಲಗಳಿಂದ ಬಂದ ಶೂದ್ರರನ್ನು ಸಂಘಟಿಸುವಾಗ ಮೇಲ್ವರ್ಗದ ಜನರಿಂದ ಪ್ರಬಲ ಪ್ರತಿರೋಧವನ್ನು ಎದುರಿಸಬೇಕಾಯಿತು. ಅದರಲ್ಲೂ ಬ್ರಾಹ್ಮಣರ ವತಿಯಿಂದ ತೀಕ್ಷ್ಣವಾದ ಸವಾಲು. ಬಸವಣ್ಣನ ನೇತೃತ್ವದಲ್ಲಿ ಸಂಘಟಿತರಾದ ಶೂದ್ರರು ಜ್ಞಾನಪಥದಲ್ಲೂ

... ಮಟ್ಟಕ್ಕೆ ಏರಿದಾಗ ಈ ಸಂಘಟನೆಯನ್ನು ಅದರ ಬೆಳವಣಿಗೆಯ ಹಂತದಲ್ಲೇ ಕೊಚ್ಚಿ ಹಾಕಬೇಕೆಂಬ ಪ್ರಯತ್ನಗಳು ನಡೆದವು. ಆದರೆ ಬಸವಣ್ಣ ಪ್ರಭುತ್ವದ ಪ್ರಮುಖ ಅಧಿಕಾರದಲ್ಲಿದ್ದುದರಿಂದ ನೇರವಾಗಿ ಅವನ ಮೇಲೆ ಹಲ್ಲೆ ಮಾಡಲು ಬರುವಂತಿರಲಿಲ್ಲ. ತಮ್ಮ ಕಾರ್ಯ ಉದ್ದೇಶಕ್ಕಾಗಿ ಪ್ರಭುವಾದ ಬಿಜ್ಜಳನ ಮನಸ್ಸನ್ನು ಕೆಡಿಸಲು ಪ್ರಾರಂಭ ಮಾಡಿದರು. ಹೊಲೆಯನ ನೆರಳು ತಮ್ಮ ಮೇಲೆ ಬೀಳಬಾರದೆಂದುಕೊಳ್ಳುತ್ತಿದ್ದ ಕಾಲದಲ್ಲಿ ಬಸವ ಹೊಲೆಯರ ಮನೆಗೆ ಹೋಗಿ ಆತಿಥ್ಯಸ್ವೀಕರಿಸುತ್ತಾನೆಂದು ಬಿಜ್ಜಳನಲ್ಲಿ ದೂರಿದರು. ಬಿಜ್ಜಳ ಮೂರ್ಖ ದೊರೆ. ಬಸವಣ್ಣ ಅಧಿಕಾರ ದುರುಪಯೋಗ ಮಾಡಿಕೊಳ್ಳುವುದರ ಜೊತೆಗೆ ಸಮಾಜ ಬಾಹಿರ ಕಾರ್ಯದಲ್ಲಿ ತೊಡಗಿದ್ದಾನೆಂದು ತಿಳಿದು ಇದರ ಬಗ್ಗೆ ಬಸವನಲ್ಲಿ ವಿಚಾರಿಸುತ್ತಾನೆ. ಅದಕ್ಕೆ ಬಸವ ಕೊಡುವ ಉತ್ತರ ಬುದ್ಧಿಗೇಡಿ ದೊರೆಯೇ ನಾನು ನಾರಾಯಣ ಕ್ರಮಿತನ ಮನೆಗೆ ಹೋದೆನೆ? ಮುಕುಂದ ಭಟ್ಟನ ಮನೆಯ ಭೋಜನ ಸ್ವೀಕರಿಸಿದನೆ? ಹೊಲೆಯರು ಎಂದು ನೀನು ಹೇಳುವವರು ಹೊಲೆಯರಲ್ಲ. ಮನೆ ನೋಡಾ ಬಡವರು, ಮನ ನೋಡಾ ಸಂಪನ್ನರು' ಎಂದು ಉತ್ತರಿಸುತ್ತಾನೆ. ಸಂಘಟನೆಯ ಯಾವ ಹಂತದಲ್ಲಿಯೇ ಆಗಲಿ ಎಂಥ ಸಂದರ್ಭದಲ್ಲಿ ಆಗಲಿ ಬಸವಣ್ಣ ಹಿಂಜರಿದದ್ದು ಕಂಡು ಬರುವುದಿಲ್ಲ. ಬಸವನನ್ನು ಅಲ್ಲಾಡಿಸಲು ಸಾಧ್ಯವಾಗದ ಮೇಲ್ವರ್ಣದ ಜನಗಳು ಕಲ್ಯಾಣದ ಸುತ್ತಮುತ್ತಲ್ಲಿದ್ದ ಇನ್ನಿತರ ವಚನಕಾರರ ಮೇಲೆ ಹಲ್ಲೆ ನಡೆಸಿದ ಘಟನೆಗಳು ಸಿಗುತ್ತವೆ. ಈ ಆಧುನಿಕ ಕಾಲದಲ್ಲಿ ಶೂದ್ರರ ಎಚ್ಚೆತ್ತ ಪ್ರಜ್ಞೆಯನ್ನು ಸಹಿಸಿಕೊಳ್ಳಲಾಗದೆ ಮೇಲ್ವರ್ಗದವರು ನಡೆಸುತ್ತಿರುವಂತಹ ಹಲ್ಲೆಗಳೇ ಅಂದೂ ನಡೆದಿದ್ದವು. ಕೇತಯ್ಯನ ಹೊಲದ ಬೆಳೆಗೆ ಬೆಂಕಿಯಿಡಲಾಯಿತು. ಕೆಂಬಾವಿ ಭೋಗಣ್ಣನೆಂಬ ಬ್ರಾಹ್ಮಣ ಶೂದ್ರನ ಮನೆಯಲ್ಲಿ ಭೋಜನ ಸ್ವೀಕರಿಸಿದ್ದಕ್ಕಾಗಿ ಊರಿನಿಂದ ಹೊರ ಹಾಕಲಾಯಿತು. ನಾವಡಿಗೆ ಗ್ರಾಮದ ಗುಂಡಮ್ಮನೆಂಬ ಶೂದ್ರ ಹೆಂಗಸು ಬ್ರಾಹ್ಮಣರಿಗೆ ಹೊಕ್ಕಾಗ ಹಿಡಿದು ಮರಕ್ಕೆ ಕಟ್ಟಿ ಚಾಟಿಯಿಂದ ಥಳಿಸಲಾಯಿತು. ಉರಿಲಿಂಗ ದೇವ ಹುಲ್ಲು ಜೋಪಡಿಯಲ್ಲಿ ವಾಸಿಸುತ್ತಿದ್ದಾಗ ಅದಕ್ಕೆ ಬೆಂಕಿ ಇಡಲಾಯಿತು. ಒಂದೇ, ಎರಡೆ ? ಕಾಲ ಮಾಸಿದ್ದರೂ ಮೇಲ್ವರ್ಗದವರ ಆಕ್ರಮಣ ವಿಧಾನ ಇಂದೂ ಹಾಗೇ ಉಳಿದಿದೆ. ಬ್ರಾಹ್ಮಣರ ಈ ಹಲ್ಲೆಯ ಜೊತೆಗೆ ಜೈನರೂ ಅಲ್ಲಲ್ಲಿ ವಚನಕಾರರ ಮೇಲೆ ಆಕ್ರಮಣ ಮಾಡಿದ ವರದಿಗಳು ಸಿಗುತ್ತವೆ.

ಈ ಎಲ್ಲಾ ಆಕ್ರಮಣಗಳ ಮುಂದೆಯೂ ಎದೆಗುಂದದೆ ಬಸವ ಮತ್ತು ಇನ್ನಿತರ ವಚನಕಾರರು ಕಲ್ಯಾಣದಲ್ಲಿಯೇ ವರ್ಣಾಶ್ರಮ ಧರ್ಮ ಮತ್ತು ಮನುಧರ್ಮಕ್ಕೆ ಸವಾಲಾಗುವಂಥ ನಿರ್ಣಯಾತ್ಮಕ ಕಾರ್ಯಕ್ಕೆ ಕೈಹಾಕಿದರು. ಮಧುವರಸನ ಮಗಳು ಮತ್ತು ಹರಳಯ್ಯನ ಮಗನ ಮದುವೆ. ನಮಗೆ ತಿಳಿದಿರುವಂತೆ ಪ್ರಥಮ ವಿಧ್ಯುಕ್ತ ಅಂತರ್ಜಾತೀಯ ವಿವಾಹ. ವಿಷಪೂರಿತ ಸಮಾಜದ ವರ್ತುಲದ ಮಧ್ಯೆ ಜರುಗಿದ ಸಾಹಸ. ಅದಕ್ಕೆ ತೆತ್ತ ಬೆಲೆ ಅಪಾರ. ಹಲವಾರು ಜನ ಇದನ್ನು ವಿಫಲ ಕ್ರಾಂತಿ ಎಂದು ಕರೆಯುತ್ತಾರೆ. ಆದರೆ ಸಂಘಟನೆಯ ಹಂತದಲ್ಲಿ ಎದುರಾಳಿಗಳ ಬಲವನ್ನು ಪೂರ್ತಿಯಾಗಿ ಪರೀಕ್ಷಿಸದೆ ಆತುರ ನಿರ್ಧಾರಗಳನ್ನು ಕೈಕೊಂಡ ತಪ್ಪು ಹೆಜ್ಜೆ. ಏಕೆಂದರೆ ಶೂದ್ರ ವಚನಕಾರರು ತಮಗೆ ಸಹಜವಾಗಿ ಬಂದ ಛಲವಂತಿಕೆಯನ್ನು ಹತ್ತಿಕ್ಕಿ ಚಾಣಾಕ್ಷತನದಿಂದ ಮುಂದುವರೆಯುವುದನ್ನು ಮರೆತರು. ಕಲ್ಯಾಣದಲ್ಲಿ ನಡೆದ ಬ್ರಾಹ್ಮಣ ವಧು ಶೂದ್ರ ವರನ ಸಾವು, ನಂತರದ ಗಲಭೆ ಇವುಗಳೆಲ್ಲ ಆಗ ತಾನೇ ಸಂಘಟಿತರಾಗುತ್ತಿದ್ದ ಶೂದ್ರರ ಭವಿಷ್ಯಕ್ಕೆ ಒಂದು ರೀತಿಯಲ್ಲಿ ಮುಳ್ಳಾದವು. ತಮ್ಮ ಅವಸರದ ಕ್ರಮದಿಂದ ವೈರಿ ಎಲ್ಲ ರಂಗದಲ್ಲೂ ಶಕ್ತಿಶಾಲಿಯಾಗಿದ್ದಾನೆಂಬ ಸಮರನೀತಿಯನ್ನೇ ಗಮನಕ್ಕೆ ತಂದುಕೊಳ್ಳಲಿಲ್ಲ

ಹನ್ನೆರಡನೇ ಶತಮಾನದ ವಚನಕಾರರ ಸಂಘಟನೆಯ ನಂತರದ ಬೆಳವಣಿಗೆ ಯಾವ ರೀತಿಯಲ್ಲೂ ಚರ್ಚಾರ್ಹವಾಗಿಲ್ಲ. 'ಲಿಂಗಧಾರಣೆ' 'ಯಜ್ಞೋಪವೀತ'ದಂತೆ ಶಾಸ್ತ್ರವಾಗಿ ಉಳಿಯಿತು. ವೀರಶೈವವೆಂಬ ಸಿದ್ಧಾಂತ ವರ್ಣಾಶ್ರಮಧರ್ಮದಂತೆ ಜಾತಿಯ ರೂಪತಾಳಿತು. ಮಠ ಮಾನ್ಯಗಳು ಅಸ್ತಿತ್ವಕ್ಕೆ ಬಂದವು. ಅಂಬಿಗರ ಚೌಡಯ್ಯ ಹೇಳುವಂಥ ಮಠಾಧಿಪತಿಗಳು ಹೆಚ್ಚಾದರು. ಶೂದ್ರರು ಮತ್ತೆ ಕೆಳಕ್ಕೆ ಜಾರತೊಡಗಿದರು. ವೀರಶೈವರು ಶೈವ ಬ್ರಾಹ್ಮಣರಿಗೆ ಹತ್ತಿರವಾಗಿ ಒಂದು ರೀತಿಯಲ್ಲಿ ಮೇಲ್ವರ್ಗವಾಗಲು ಹವಣಿಸಿದರು. ಒಂದು ಕಾಲಕ್ಕೆ ಶೂದ್ರರ ಸಂಘಟನೆಯ ಮುಖಾಂತರ ವರ್ಣಾಶ್ರಮ ವ್ಯವಸ್ಥೆಗೆ ಪ್ರಬಲ ಸವಾಲನ್ನೆಸೆದ ಸಿದ್ಧಾಂತವೊಂದರ ಅವನತಿ ವಿಧಿಯ ವಿಪರ್ಯಾಸವೆಂದೇನೂ ಅನಿಸುವುದಿಲ್ಲ. ಸ್ವಾರ್ಥಪರರಾದ ಜಂಗಮ ಮುಖಂಡರುಗಳು ಈ ವಿಶಾಲ ಸಂಘಟನೆಯನ್ನೊಡೆದು ಘಟಕವನ್ನಾಗಿಸಿ ತಮ್ಮನ್ನು ಶ್ರೇಷ್ಠರೆಂದು ಗುರುತಿಸಿಕೊಳ್ಳಲು ನಡೆಸಿದ ಸ್ವಾರ್ಥ ಎಂದು ವಸ್ತುನಿಷ್ಠವಾಗಿ ನೋಡುವವರಿಗೆ ಅನಿಸದೆ ಇರುವುದಿಲ್ಲ.

ಗ್ರಂಥಋಣ :


1 ಸಕಲಪುರಾತನ ವಚನಗಳು ಭಾಗ ೧,೨
ಕರ್ನಾಟಕ ವಿಶ್ವವಿದ್ಯಾನಿಲಯ
ಸಂಪಾದಕರು ಎಂ. ಎಸ್. ಸುಂಕಾಪ

2 ಅಂಬಿಗರಚೌಡಯ್ಯನ ವಚನಗಳು ಸಂಪಾದಕ
ಬಸವರಾಜಸಿದ್ಧಾಶ್ರಮ ಡಾ॥ ಎಸ್.ವಿದ್ಯಾಶಂಕ

3 ವಚನ ಧರ್ಮಸಾರ ಎಂ. ಆರ್. ಶ

4 ಮೊದಲ ವಚನಕಾರ ಮಾದಾರ ಚನ್ನಯ್ಯ
ಶಾಂತರಸ

5 ಶಿವಶರಣರ ಚರಿತ್ರೆಗಳು ಭಾಗ ೧,
ಫ. ಗು. ಹಳಕಟ್ಟಿ

6 12ನೆ ಶತಮಾನದ ಕಾಯಕಜೀವಿಗಳುಸಿ.ವೀರ

7 Who were Sudras ?
Dr. B. R. Ambedka

8 The Veerashiva Social philo-
sophy. —Dr. S. M. Hunash


## ಪ್ರಶ್ನೆಗಳ ಹಾಡು

ಹೊಲೆಯರ ಹಟ್ಟಿಯ ಹೊಟ್ಟೆಗಳಲ್ಲಿ
ಹಸಿವಿನ ಕುಣಿತ ನೋಡಿದಿರಾ
ಮಾದಿಗರಟ್ಟಿಯ ತಟ್ಟೆಗಳಲ್ಲಿ
ನರಳುವ ಹಾಡನು ಕೇಳಿದಿರಾ
ಕಪ್ಪು ಕರುಗಳು ಕುಡಿಯುವ ಕೆಚ್ಚಲು
ಬತ್ತಿದೆ ಬವಣೆ ನೋಡಿದಿರಾ
ಕೆಂಗಿವಿ ಮೊಲಗಳು ಕೆಂಡವ ತುಳಿದು
ಕೊರಗುವ ದನಿಯನು ಕೇಳಿದಿರಾ
ತಲೆ ಬಗ್ಗಿಸಿ ನಡೆಯುವ ಭಕ್ತಿಯ ಕಲಿಸುವ
ಜೋಪಡಿ ಬಾಗಿಲ ನೋಡಿದಿರಾ
ಅಕ್ಷರ ಅರಿಯದ ದಲಿತರ ನಾಲಿಗೆ
ತೊದಲುವ ಶಬ್ದವ ಕೇಳಿದಿರಾ
ಹಸಿದ ಹುಲಿಗಳು ಹುಲ್ಲನು ಮೂಸುವ
ಪುರಾಣದ ಅಚ್ಚರಿ ನೋಡಿದಿರಾ
ಮಿಲ ಮಿಲ ಒದರುವ ಒಣಗಿದ ಕರುಳಿನ
ಕೀರಲು ಸ್ವರಗಳ ಕೇಳಿದಿರಾ
ಗುಡಿಸಲ ತುದಿಗಳ ಪೊರೆಯುವ ಕೈಗಳು
ಮುಳುಗಿವೆ ತಂಪು ಹಾಲಿನಲಿ
ಗುಡಿ ಅರಮನೆಗಳ ಕಟ್ಟಿದ ಕೈಗಳು
ಚೆಲ್ಲಿವೆ ಬೇಯುವ ಬೀದಿಯಲಿ
ಕುರಿಗಳ ಕೊರಳನು ಕಡಿಯುವ ಬೆಳಕು
ರಕ್ತದ ಹೊಗೆಯನು ನೋಡಿದಿರಾ
ಘರ್ಜಿಸಿ ಕೆರಳಿದ ಹುಲಿಗಳ ತಲೆಯಲಿ
ಮಿಂಚುವ ಕಿರೀಟ ನೋಡಿದಿರಾ ॥

—ರಾ. ಮೂತಿ

ಇಂದು ನೆಡುವ ಒಂದು ಮರ...        ನಾಳಿನ ಬಾಳಿನ ಆಧಾರ.

# ಇಂದೇ ಒಂದು ಮರ ನೆಡಿರಿ.

## ಉಚಿತ ಸಸಿಗಳು ನಿಮಗಾಗಿ ಕಾದಿವೆ

ನೀವೊಂದು ಮರ ನೆಟ್ಟರೆ, ಆ ಮರದಿಂದ ನೀವು ಪಡೆಯುವ ಪ್ರಯೋಜನ ಒಂದೆರಡಲ್ಲ. ಪ್ರಯೋಜನ ನಿಮ್ಮೊಬ್ಬರಿಗೆ ಅಲ್ಲ. ನಿಮ್ಮ ಮನೆಯವರಿಗೆ, ಸುತ್ತಮುತ್ತಲ ಜನರಿಗೆ, ಎಲ್ಲರಿಗೂ.

ನಮ್ಮ ಪೂರ್ವಜರಿಗೆ ಮರಗಳ ಮಹತ್ವ ತಿಳಿದಿತ್ತು. ಆದ್ದರಿಂದಲೇ ಆ ಕಾಲದಲ್ಲಿ ಪ್ರತಿಯೊಂದು ಹಳ್ಳಿಯಲ್ಲಿಯೂ ಮರಗಳ ಒಂದು ತೋಪು ಇರುತ್ತಿತ್ತು. ಪಟ್ಟಣಗಳಲ್ಲಿ ಪ್ರತಿಯೊಂದು ಮನೆಗೂ ಒಂದೆರಡು ಮರಗಳು ತಂಪಿನ ಆಸರೆ ನೀಡುತ್ತಿದ್ದವು.

ಆದರೆ ಇಂದು ನಮ್ಮ ಅರಣ್ಯ ಸಂಪತ್ತು ಕ್ಷೀಣಿಸಿದೆ. ಉರುವಲಿಗಾಗಿ, ಮರಮುಟ್ಟುಗಳಿಗಾಗಿ, ಜಾನುವಾರುಗಳ ಮೇವಿಗಾಗಿ, ಕಾಡನ್ನು ಕಡಿದು ನಾಶಪಡಿಸಲಾಗಿದೆ. ಅಕ್ರಮವಾಗಿ, ಮರ ಕಡಿಯುವುದರಿಂದಷ್ಟೇ ಅಲ್ಲ, ಕಾಳ್ಗಿಚ್ಚಿನಿಂದಲೂ ಮರಗಳು ನಾಶವಾಗುತ್ತಿವೆ. ಇದರ ಪರಿಣಾಮ ನಮ್ಮ ಭವಿಷ್ಯಕ್ಕೆ ಮಾರಕ. ನಮ್ಮ ಅಮೂಲ್ಯವಾದ ಕಾಡುಗಳು ಕಣ್ಮರೆಯಾದರೆ ನಮಗೆ ಕ್ಷಾಮ, ನೆರೆ ಹಾವಳಿ, ಅಷ್ಟೇಕೆ ಪರಿಸರದ ಅವನತಿ–ಎಲ್ಲವೂ ನಿಶ್ಚಿತ.

ಆದರೆ ಒಂದು ಆಶಾಕಿರಣವಿದೆ. ನಾವು ಪ್ರಯತ್ನಿಸಿದರೆ ಈಗಲೂ ನಮ್ಮ ನಾಡನ್ನು ಹಸಿರು ಮರಗಳ ನಂದನವನವನ್ನಾಗಿಸಬಹುದು. ಹೌದು. ಈ ಕಾರ್ಯದಲ್ಲಿ ನಿಮ್ಮ ಪ್ರಯತ್ನವೇ ಮುಖ್ಯ. ನೀವು ಒಂದು ಗಿಡ ನೆಡುವ ಮೂಲಕ ನೆರವಾಗಬಹುದು. ಸಾಧ್ಯವಾದರೆ, ಇಂದೇ ಒಂದು ಗಿಡ ನೆಡಬಹುದು. ನಿಮ್ಮ ಕೈ ತೋಟದಲ್ಲಿ, ಹಿತ್ತಲಿನಲ್ಲಿ, ಹೊಲದಲ್ಲಿ, ನಿಮ್ಮ ಶಾಲೆಯ ಕಾಂಪೌಂಡಿನಲ್ಲಿ ಎಲ್ಲಿ ಬೇಕಾದರೂ ಒಂದೇ ಗಿಡವೇಕೆ ಅವಕಾಶವಿದ್ದರೆ ಸಾವಿರಾರು ನೆಡಬಹುದಲ್ಲವೆ ?

ಇದು ತುಂಬಾ ಸುಲಭ; ಏನೂ ಖರ್ಚಿಲ್ಲ! ಕರ್ನಾಟಕ ಸರ್ಕಾರದ ಅರಣ್ಯ ಇಲಾಖೆ, ನೀವು ಗಿಡ ನೆಡಲು ಸಹಾಯ ಮಾಡುವ ಯೋಜನೆಯೊಂದನ್ನು ಜಾರಿಗೆ ತಂದಿದೆ. ಇಲಾಖೆ ನಿಮಗೆ ಸಸಿಗಳನ್ನು ಬೀಜಗಳನ್ನು ಪೂರೈಸುತ್ತದೆ. ಉಚಿತವಾಗಿ! ತ್ವರೆಮಾಡಿ! ನಿಮ್ಮ ಕೈಲಾಧಷ್ಟು ನೆರವು ನೀಡಿ. ನಿಮಗೆ ಹತ್ತಿರವಿರುವ ಅರಣ್ಯ ಇಲಾಖೆಯ ಕಚೇರಿಯನ್ನು ಸಂಪರ್ಕಿಸಿ, ಅಥವಾ ನಮಗೆ ಬರೆಯಿರಿ.

ಅಧಿಕ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,
ಸಾಮಾಜಿಕ ಅರಣ್ಯ ಯೋಜನೆ,
54, ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು-560 003

ಮರಗಳು ನಿಮ್ಮ ಭವಿಷ್ಯ ನಿಧಿ

ಕರ್ನಾಟಕ ವಾರ್ತೆ

# ಕನ್ನಡನಾಡು, ನುಡಿಯ ಇತಿಹಾಸ ಭವ್ಯ
# ಅದರ ಪುನರುತ್ಥಾನಕ್ಕೆ ನಮ್ಮ ಯೋಜನೆಗಳು

ಕರ್ನಾಟಕ ತನ್ನದೇ ಆದ. ಭವ್ಯ ಪರಂಪರೆಯನ್ನು ಹೊಂದಿದೆ. ಈ ಪರಂಪರೆಯನ್ನು ಉಳಿಸಿ, ಬೆಳೆಸಿ, ಕನ್ನಡ ಭಾಷೆಯನ್ನು ಅಭಿವೃದ್ಧಿಗೊಳಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಎರಡು ಪ್ರಮುಖ ಯೋಜನೆಗಳನ್ನು ಹಮ್ಮಿಕೊಂಡಿದೆ.

**1 ಕನ್ನಡ ಅಭಿವೃದ್ಧಿ :**

ಈ ಯೋಜನೆಯಡಿ ತರಬೇತಿ ಶಿಬಿರಗಳು ಭಾಷಾಂತರ ಮತ್ತು ಪ್ರಕಟಣೆಗಳು ಹಾಗೂ ಇತರ ಪ್ರೋತ್ಸಾಹ ಯೋಜನೆಗಳನ್ನು ಹಮ್ಮಿಕೊಂಡಿದ್ದು, ಈ ಮೂಲಕ ರಾಜ್ಯದ ಶಾಸಕಾಂಗ, ನ್ಯಾಯಾಂಗ ಮತ್ತು ಕಾರ್ಯಾಂಗದ ಎಲ್ಲ ಅಧಿಕಾರಿಗಳು ಮತ್ತು ನೌಕರರಿಗೆ ಆಡಳಿತ ಕನ್ನಡದಲ್ಲಿ ತರಬೇತಿ, ಎಲ್ಲ ಇಲಾಖೆಗಳ ಪಾರಿಭಾಷಿಕ ಶಬ್ದ ಕೋಶಗಳ ರಚನೆ, ಪರಿಷ್ಕರಣ ಹಾಗೂ ಅನುವಾದ, ಕನ್ನಡ ಬೆರಳಚ್ಚುಗಾರರು ಮತ್ತು ಶೀಘ್ರಲಿಪಿಗಾರರಿಗೆ ಪ್ರೋತ್ಸಾಹ, ಧನಸಹಾಯ ಮತ್ತು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಕೆಲಹಂತದಲ್ಲಿ ವಿದ್ಯಾರ್ಥಿವೇತನ ನೀಡಿಕೆ ಮುಂತಾದ ಕಾರ್ಯಕ್ರಮಗಳು.

**2 ಸಾಹಿತ್ಯ ಮತ್ತು ಸಂಸ್ಕೃತಿ ಚಟುವಟಿಕೆಗಳು :**

ರಾಜ್ಯದಲ್ಲಿ ಸಾಹಿತ್ಯ, ನಾಟಕ, ಲಲಿತಕಲೆ, ಸಂಗೀತ, ನೃತ್ಯ, ಜಾನಪದ ಯಕ್ಷಗಾನ ಮತ್ತು ಉರ್ದು ಅಕಾಡೆಮಿಗಳು ಸ್ಥಾಪಿತಗೊಂಡಿವೆ. ಇವುಗಳ ಮೂಲಕ ಸಾಹಿತಿಗಳು ಕಲಾವಿದರಿಗೆ ಸೂಕ್ತ ಪ್ರೋತ್ಸಾಹ; ರಾಜ್ಯದ ಹೊರಗಡೆಯೂ ತಮ್ಮ ಪ್ರತಿಭೆ ತೋರಲು ಎಲ್ಲ ಅವಕಾಶ ಮತ್ತು ಪ್ರೋತ್ಸಾಹ; ಪುಸ್ತಕಗಳ ಪ್ರಕಟಣೆ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ವಿಚಾರ ಸಂಕಿರಣಗಳು ಲೇಖಕರಿಗೆ ಮತ್ತು ಕಲಾವಿದರಿಗೆ ಪ್ರಶಸ್ತಿ ನೀಡಿಕೆ, ಮಾಸಾಶನ ಮತ್ತು ಗೌರವಧನ ನೀಡಿಕೆ, ಲೇಖಕರು ಮತ್ತು ಕಲಾವಿದರ ವಿಶೇಷ ಜ್ಞಾನಾರ್ಜನೆಗಾಗಿ ಪ್ರವಾಸಾನುದಾನ, ವೈದ್ಯಕೀಯ ನೆರವು, ಹೊರನಾಡಿನ ಕನ್ನಡ ಸಂಘ ಸಂಸ್ಥೆಗಳ ಚಟುವಟಿಕೆಗಳಿಗೆ ಸಹಾಯಧನ, ರಂಗ ತರಬೇತಿ ಕಾರ್ಯಕ್ರಮ ತರಬೇತಿ ಶಿಬಿರಗಳು, ಗ್ರಂಥ ಭಂಡಾರಗಳಿಗೆ ಸಹಾಯಧನ ನೀಡಿಕೆ, ಮುಂತಾದ ಕಾರ್ಯಕ್ರಮಗಳು. ಇಷ್ಟೇ ಸಾಲದೆಂಬಂತೆ ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಸ್ಥಾನವಾಗಿ ಬೆಂಗಳೂರಿನಲ್ಲಿ ರವೀಂದ್ರ ಕಲಾಕ್ಷೇತ್ರ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ರಂಗಮಂದಿರಗಳು.

ಈ ಎಲ್ಲ ಕಾರ್ಯಕ್ರಮಗಳಿಂದಾಗಿ ಕನ್ನಡ ಭಾಷೆ ಮತ್ತು
ನಾಡಿನ ಭವ್ಯ ಪರಂಪರೆಯ ಪುನರ್‌ನಿರ್ಮಾಣವಾಗುತ್ತಲಿದೆ.

# ಸೋಲಿನಿಂದ ಸೋಲಿಗೆ... ಡಾ|| ಬಿಳಿಗಿರಿರಂಗಯ್ಯ

(13ನೇ ಪುಟದಿಂದ)

"ಎರಡು ಸೇನೆ ನಿಂತಿವೆ. ಒಂದು ಕಡಲಿ ಬರೀ ಸಿಂಹಗಳು ಸೈನಿಕರು. ಆದ್ರೆ ಅವರ ಲೀಡರು ಒಂದು ಜಿಂಕೆ. ಇನ್ನೊಂದು ಕಡಲಿ ಬರೀ ಜಿಂಕೆಗಳು ಸೈನಿಕರು. ಅವರ ಲೀಡರು ಒಂದು ಸಿಂಹ ಎರಡು ಸೇನೆಗೂ ಯುದ್ಧ ನಡುದ್ರೆ ಯಾರು ಗೆದ್ದರು ಹೇಳುವಂತ.' ನಾನು ಅಲೆ ಅಲೆಯಾಗಿ ನಕ್ಕುಬಿಟ್ಟೆ. ಅವರು ಯಾಕೆ ಯಾಕೆ ? ಎಂದರು. ಪ್ರತಿಯಾಗಿ ನಾನು ಸಾಧ್ಯವೇ ಇಲ್ಲ. ಜಿಂಕೆ ಮತ್ತು ಸಿಂಹಗಳು ಒಟ್ಟಾಗಿರಲು ಸಾಧ್ಯವೇ ಇಲ್ಲ. ನಿಮ್ಮ ಮಾತು ನಿಸರ್ಗ ನಿಯಮಕ್ಕೆ ವಿರೋಧ. ಯಾರೂ ನಂಬಲು ಸಾಧ್ಯವಿಲ್ಲದ್ದು. ಜಿಂಕೆಗಳೂ ಸಿಂಹಗಳೂ ಒಟ್ಟಿಗೆ ಬಾಳ್ತವಾ ? ಒಂದು ವೇಳೆ ಸಾಧ್ಯವಾದ್ರು ಜಿಂಕೆಯೊಂದಕ್ಕೆ ಲೀಡರ್ ಶಿಪ್ ಕೊಡ್ತವ ?

"ಸಾಧ್ಯ ಅಂತ ತಿಳ್ಕೊ. ಮತ್ತೆ ಉತ್ತರಕೊಡು"

ಒಂದ್ಕಡೆ ಸಿಂಹಗಳ ಸೇನೆ. ಜಿಂಕೆಯ ಅಡಿಯಾಳಾಗಿರುವ ಸಿಂಹಗಳು ಸಿಂಹದ ಗುಣ ಕಳಕೊಂಡಿವೆ. ಹಾಗಾಗಿ ಅವು ಕೇವಲ ಜಿಂಕೆಯನ್ನ ತಮ್ಮ ನಾಯಕನನ್ನಾಗಿ ಆರಿಸಿವೆ. ಜಿಂಕೆಯ ಸರ್ವಾಧಿಕಾರವನ್ನು ಒಪ್ಪಿಕೊಂಡಿರುವ ಸಿಂಹಗಳ ಸೇನೆ ಹೇಡಿಗಳ ಒಂದು ಗುಂಪು ಅಷ್ಟೆ. ಈ ಗುಂಪಿನಲ್ಲಿ ಸಾಹಸ ಪ್ರವೃತ್ತಿ ಸೊನ್ನೆ. ಆದರಿಂದಾಗಿ ಎದುರು ಗುಂಪಿನಿಂದ ಈ ಗುಂಪು ಸೋಲುವ ಸಾಧ್ಯತೆ ಬಹಳಷ್ಟು ಹೆಚ್ಚು.

ಸಿಂಹದ ಸರ್ವಾಧಿಕಾರಕ್ಕೆ ಒಳಪಟ್ಟ ಜಿಂಕೆಗಳು ಮತ್ತು ಜಿಂಕೆಯ ಸರ್ವಾಧಿಕಾರಕ್ಕೆ ಒಳಪಟ್ಟ ಸಿಂಹಗಳು—ಎರಡೂ ಕೂಡಾ ತಪ್ಪು. ಮಾನವತೆಯನ್ನು ಪ್ರಾಣಿಗಳೊಡನೆ ಹೋಲಿಸಲಾಗದು."

"ಆಹಾ ಅದ್ಭುತವಾದ ಉತ್ತರ"—ಡಾಕ್ಟರ್ ಬಿಳಿಗಿರಿ ರಂಗಯ್ಯನವರು ಸಂತೋಷದಿಂದ ಚೀತ್ಕರಿಸಿದರು. ಈ ಪುರಾಣಗಾರ ಮುದುಕನ ಅಸಂಗತ ಪ್ರಶ್ನೆಗಳಿಗೆ ಉತ್ತರಿಸುತ್ತಾ ಕೂರುವುದರಲ್ಲಿ ಅರ್ಥವಿಲ್ಲ ಅನಿಸಿತು.

ಯಾಕೋ ಅತ ಹೇಳಿದರು. ಅವರ ಅತಿ ಮೆಲುವಾದ ಆ ದನಿ ಇನ್ನೂ ನನ್ನ ಕಿವಿಗಳಲ್ಲಿ ಗುನುಗುತ್ತಿದೆ. ಒಂದು ಕಾಲಕ್ಕೆ ನಾನು ಕೂಡಾ ನಿನ್ನ ಹಾಗೆ young and emotional ಆಗಿದ್ದೆ. ಏನೂ ಪ್ರಯೋಜನವಾಗಿಲ್ಲ. ರಾಜಕೀಯವಾಗಿ ಮೇಲಕ್ಕೆ ಬರಕ್ಕಾಗಿಲ್ಲ. ಹೋಗ್ಲಿ ನೀನೇ ನಾಳೆ ಮುಖ್ಯಮಂತ್ರಿ ಆಗ್ತಿ ಅಂತಿಟ್ಕೋ ಆಗೇನು ಮಾಡ್ತೀಯ ?

"ಮೊದಲು ಎಲ್ಲಾ ದಲಿತರಿಗೂ ಕೆಲ್ಸ. ಎಲ್ಲ ಭೂರಹಿತರಿಗೂ ಭೂಮಿ ಹಂಚಿಕೆ. ನಂತರ ಎಲ್ಲಾ ಬಡವರಿಗೂ ಕೆಲ್ಸ ಸೃಷ್ಟಿಸುವುದನ್ನ ಮಾಡ್ತೀನಿ. ಆಸ್ತಿ ಪಕ್ಕನ್ನ ಕಿತ್ತಾಕ್ತೀನಿ. ಅನ್ನ ಬಟ್ಟೆ ಮನೆಗೆ ನಮ್ಮ ಜನರ ಪರದಾಟವನ್ನ ನಿಲ್ಲಿಸ್ತೀನಿ" ಡಾಕ್ಟರ್ ಸಾಹೇಬರು ಗರಬಡಿದು ಕೂತರು. ನಾನೇ ಮುಂದುವರಿದು ಮಾತಾಡಿದೆ.

"ಸಾರ್ ತಾವು ನನ್ನನ್ನು ಕರೆಸಿದ ಉದ್ದೇಶವಾದರು ಏನು ?"

"ನಾನು electionಗೆ ನಿಲ್ತಾಯಿದೀನಿ. ನೀನು ನಂಗೆ ಸಪೋರ್ಟ್ ಮಾಡಬೇಕು"

"ನಿಮಗೆ ಸಪೋರ್ಟ್ ಮಾಡಲು ನನಗೆ ವೈಯಕ್ತಿಕವಾದ ಇಷ್ಟವಿದೆ. ನಮ್ಮ ಸಂಘವು ಒಪ್ಪುವುದಾದರೆ ನಾನು ನಿಮಗೆ ಖಂಡಿತಾ ಸಪೋರ್ಟ್ ಮಾಡುವೆ."

"ಹಾಗಾದ್ರೆ ನಾನು ನನ್ನ ನಾಮಿನೇಷನ್ ವಾಪಸ್ ತಗಳ್ಳಲ್ಲ"

"ತಗೋಬೇಡಿ" ಎಂದು ನಾನು ಹೊರಬಿದ್ದೆ ಫೆಬ್ರುವರಿ 11 ರಂದು ಅವರ ಬಲವಂತಕ್ಕೆ ಕಟ್ಟುಬಿದ್ದು ಕೆಲವು ಹಳ್ಳಿಗಳಿಗೆ ಹೋದೆ. ಅದೊಂದು ಆಕಸ್ಮಿಕ. ಅದಾದನಂತರ ಅವರಿಂದ ತಪ್ಪಿಸಿಕೊಂಡ ನಾನು ಮತ್ತೆ ನಂಜನಗೂಡಿಗೆ ಹೋದದ್ದು ಚುನಾವಣೆಯ ದಿನ.

ದಲಿತ ಜನಾಂಗದ ಇತಿಹಾಸವನ್ನೇ ಬದಲಿಸಿ ನಮ್ಮ ಜನರನ್ನು ಕತ್ತಲಿಂದ ಬೆಳಕಿಗೆ ನಡೆಸಬಹುದಾಗಿದ್ದ ಈ ಮಹಾಚೇತನ ಸ್ವತಃ ತಾನೇ ಒಂದು ಕತ್ತಲೆಯ ಸಮುದ್ರವಾಗಿ ಪರಿವರ್ತನೆಗೊಂಡದ್ದು ಅತ್ಯಂತ ನೋವು ತುಂಬಿದ ವಾಸ್ತವ.



ಸಂಪಾದಕ, ಪ್ರಕಾಶಕ ಮುದ್ರಕ : ಗೋವಿಂದಯ್ಯ, ಮಹೇಶ್ವರ ಮುದ್ರಣಾಲಯ, 407, 14 ಮೈನ್, ಸರಸ್ವತಿಪುರಂ ಮೈಸೂರು–570009,

# ಪ್ರಾಣ ಪಣವಿಟ್ಟು ದಲಿತ ನೌಕರನ ಸತ್ಯಾಗ್ರಹ

(1ನೇ ಪುಟದಿಂದ)

ಹೊಡೆಸಿದರು. ಈ ಬಗ್ಗೆ ದೂರು ಪ್ರತಿದೂರು ವಿಧಾನ ಸೌಧದ ಪೋಲೀಸ್ ಠಾಣೆಯಲ್ಲಿ ದಾಖಲಾಗಿದ್ದು, ಪ್ರಕರಣ ನ್ಯಾಯಾಲಯದಲ್ಲಿದೆ. ಸಬ್ ಇನ್ಸ್‌ಪೆಕ್ಟರ್ ಕಾರಣದಿಂದಾಗಿ ಮತ್ತು ಕಿರುಕುಳ ತಪ್ಪಿಸಿಕೊಳ್ಳುವ ಸಲುವಾಗಿ ಕಚೇರಿಯ ಕಡೆ ನಾನು ಇದೂವರೆಗೂ ಹೋಗಲಿಲ್ಲ. ಆದರೆ ವಿಚಾರಣಾ ದಿನಗಳಲ್ಲಿ ತಪ್ಪದೆ ಹಾಜರಾಗುತ್ತಾ ಬಂದಿರುತ್ತೇನೆ. ಇದಕ್ಕೆ ಲಿಖಿತ ಸಾಕ್ಷಿ ವಿಜಿಲೆನ್ಸ್ ನಂ. ಐ.ಎನ್.ಜೆ. 24(3): 82–83, ಮತ್ತು ನಗರದ 6ನೇ ಮೆಟ್ರೊಪಾಲಿಟನ್ ಮ್ಯಾಜಿಸ್ಟ್ರೇಟ್‌ರವರ ನ್ಯಾಯಾಲಯದ ಕೇಸ್ ನಂ. ಸಿ.ಸಿ. 1667 82".

ಗೋಪಾಲ್ ಮೇಲೆ ಇದ್ದ ಇನ್ನೊಂದು ಆರೋಪ "3000ರೂ. ಎಲ್. ಟಿ. ಸಿ. ಹಣದ, ದುರುಪಯೋಗ." ಈ ಬಗ್ಗೆ ಅವರ ಅದೇ ಹೇಳಿಕೆಯ ಇನ್ನೊಂದು ಭಾಗ ಈ ರೀತಿ ಹೇಳುತ್ತದೆ.

"ಸತ್ಯ ಸಂಗತಿ ಈ ರೀತಿ ಇದೆ. ನಾನು ಪ್ರವಾಸ ಹೋಗಬೇಕೆಂಬ ಆಸೆಯಿಂದ ಎಲ್.ಟಿ.ಸಿ. ಹಣ ಮಂಜೂರು ಮಾಡಿಸಿಕೊಂಡೆ. ಆದರೆ ಹಣ ಪಡೆದ ಐದು ದಿನಗಳಲ್ಲಿ ನನ್ನ ವರ್ಗಾವಣೆಯಾಯಿತು. ಇಂತಹ ಪರಿಸ್ಥಿತಿಯಲ್ಲಿ ಯಾರಿಗೆ ಆಗಲಿ ಪ್ರವಾಸ ಹೋಗಲು ಹೇಗೆ ತಾನೇ ಮನಸ್ಸು ಬಂದೀತು ? ಹೀಗಾಗಿ ನಾನು ಪ್ರವಾಸ ಹೋಗಲಿಲ್ಲ. ಹಣ ಹಿಂದಿರುಗಿಸಲು ಹೋದಾಗ ಸಂಬಂಧಿಸಿದ ಅಧಿಕಾರಿ ಹಣ ಸ್ವೀಕರಿಸಲಿಲ್ಲ. ಈ ಅಧಿಕಾರಿಯ ಹೆಸರು ಎಸ್. ಎಸ್. ಕುಡುಪಿ, ಎಂ. ಜಯರಾಜ್‌ರವರ ಬಲಗೈ ಬಂಟ. ನನಗೆ ಕಿರುಕುಳ ನೀಡಿದವರಲ್ಲಿ ಪ್ರಮುಖ ವ್ಯಕ್ತಿ. ಹಣವನ್ನು ಕೇಂದ್ರ ಕಚೇರಿಯಲ್ಲಿಯೇ ಭದ್ರವಾಗಿಟ್ಟು, ಈ ಬಗ್ಗೆ ಮೀನುಗಾರಿಕೆ ನಿರ್ದೇಶಕರಿಗೆ ಹಿಂದೆಯೇ ತಿಳಿಸಿರುತ್ತೇನೆ. ಈ ಅಂಶವನ್ನು ಮೀನುಗಾರಿಕೆ ನಿರ್ದೇಶಕರು ಅಲ್ಲಗಳೆದಿಲ್ಲ. ಈಗಲೂ ಆ ಹಣ ಕಚೇರಿಯಲ್ಲಿಯೇ ಇದೆ. ನನ್ನ ಹೆಸರಿಗೆ ಮಸಿ ಬಳಿಯಲು ಕ್ಷುಲ್ಲಕ ಆರೋಪ ಮಾಡಲಾಗಿದೆ. ನನ್ನ 17 ವರ್ಷಗಳ ಸೇವೆಯಲ್ಲಿ ಎಂದೂ ತಪ್ಪು ಮಾಡಲಿಲ್ಲ. ಹಣದ ದುರುಪಯೋಗ ಮಾಡಲಿಲ್ಲ. ಹೀಗಿರುವಾಗ ಈ ಜುಜುಬಿ 3000ರೂ ಹಣ ನನ್ನಂತಹವರು ದುರುಪಯೋಗ ಮಾಡಿಕೊಳ್ಳುವುದು ಕನಸಿನ ಮಾತು. ಇಲಾಖೆಯಲ್ಲಿ ಎಲ್. ಟಿ. ಸಿ. ಹಣ ದುರುಪಯೋಗಪಡಿಸಿಕೊಂಡ ಅನೇಕ ನೌಕರರಿದ್ದಾರೆ. ಅವರ ಸಂಬಳದಿಂದ ಕಡಿತ ಮಾಡಿಕೊಂಡು ಸೇವೆಯಲ್ಲಿ ಮುಂದುವರಿಸಲಾಗಿದೆ. ಅವರನ್ನು ವಜಾ ಮಾಡಲಿಲ್ಲ. ಆದರೆ ನನ್ನ ಮೇಲೆ ಏಕೆ ಕಠಿಣ ಶಿಕ್ಷೆ ? ಇಲಾಖೆಯಲ್ಲಿ ಹಣ ದುರುಪಯೋಗ ಮಾಡಿಕೊಂಡವರು 'ಆರಾಮ'ವಾಗಿದ್ದಾರೆ. ಅವರ ಮೇಲೆ ಏನೂ ಕ್ರಮವಿಲ್ಲ. ಸರಕಾರದ ಬೊಕ್ಕಸಕ್ಕೆ ಲಕ್ಷಾಂತರ ರೂ.ಗಳ ನಷ್ಟವನ್ನುಂಟು ಮಾಡಿದ ಹಿಂದಿನ ನಿರ್ದೇಶಕ ಎಂ. ಜಯರಾಜ್‌ರ ಮೇಲೆ ಯಾವ ಕ್ರಮವೂ ಇಲ್ಲ. ಇಂತಹ ವ್ಯಕ್ತಿಗೆ ನನ್ನಂತಹ ಪ್ರಾಮಾಣಿಕರ ಮೇಲೆ ಹಣ ದುರುಪಯೋಗದಂತಹ ಆಪಾದನೆ ಮಾಡಲು ಯಾವ ನೈತಿಕ ಹಕ್ಕೂ ಇಲ್ಲವೆಂದು ಕಠಿಣವಾಗಿ ಹೇಳಬಯಸುತ್ತೇನೆ."

ಗೋಪಾಲ್‌ರವರು ಇಲಾಖೆಯಿಂದ ವಜಾ ಆದ ಹಿನ್ನೆಲೆಯನ್ನು ಈಗ ನೋಡೋಣ. ದಿನಾಂಕ 2–6–81ರಂದು ಸರಕಾರ ಒಂದು ವಿಶೇಷ ಆಜ್ಞೆ ಹೊರಡಿಸಿ ಅವರ ಮೇಲಿನ ಶಿಸ್ತು ಅಧಿಕಾರವನ್ನು ಮೀನುಗಾರಿಕೆ ನಿರ್ದೇಶಕರಿಂದ ಕಿತ್ತು ಬೆಂಗಳೂರಿನ ಜಿಲ್ಲಾಧಿಕಾರಿಗಳಿಗೆ ವಹಿಸಿತು. (ಆಜ್ಞೆ ಸಂಖ್ಯೆ ಎ ಎ. ಹೆಚ್. 81 ಎಸ್. ಎಫ್. 81 ತಾ॥ 2–6–81) ಇದಾದ ನಂತರ ಬೆಂಗಳೂರಿನ ಜಿಲ್ಲಾಧಿಕಾರಿಗಳು ಗೋಪಾಲ್‌ರವರ ಎಲ್ಲಾ ಪ್ರಕರಣಗಳನ್ನು ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಉದ್ಯೋಗಿಗಳ ಕ್ಷೇಮಾಭಿವೃದ್ಧಿ ಸಂಘದ ಆಪಾದನೆಗಳನ್ನು ಕೂಲಂಕುಶವಾಗಿ ವಿಚಾರಣೆ ಮಾಡಿ 3 ತಿಂಗಳಲ್ಲಿ ವರದಿ ಒಪ್ಪಿಸಲು 'ಜಾಗೃತಿ ಆಯೋಗ'ಕ್ಕೆ ಒಪ್ಪಿಸಿದರು. (ಇದರ ಆಜ್ಞೆಯ ಸಂಖ್ಯೆ ಇ.ಎಸ್.ಟಿ. 2 ಸಿ.ಸಿ.ಎ. 4/ 81–82. ತಾ॥ 25–10–82, 5–11–82) ಜಾಗೃತಿ ಆಯೋಗದ ಮುಂದೆ ಈ ಪ್ರಕರಣ ಎವಿಡೆನ್ಸ್‌ಗೆ ಬರುವ ವೇಳೆಗೆ ಏನಾಯಿತೆಂಬುದನ್ನು ಅವರ ಬಾಯಿಯಿಂದಲೇ ಕೇಳಬಹುದು.

"ಹಿಂದಿನ ನಿರ್ದೇಶಕ ಎಂ. ಜಯರಾಜ್ ಮತ್ತು ಸಂಗಡಿಗರು ಕಿತಾಪತಿ ಮಾಡಿ ನನ್ನ ವಿರುದ್ಧ ಒಂದು ಮಿನಿ ವಿಚಾರಣೆಗೆ ಆಜ್ಞೆ ಮಾಡಿದರು. (ಆಜ್ಞೆಯ ಸಂಖ್ಯೆ ಎ. ಡಿ. ಎ. 72/ 82–83 ತಾ॥ 13–12–83) ಈ ಆಜ್ಞೆಯನ್ನು ಹೊರಡಿಸಲು ನಿರ್ದೇಶಕರಿಗೆ ಯಾವ ಅಧಿಕಾರವೂ ಇರಲಿಲ್ಲ. ನನ್ನ ಪ್ರತಿಭಟನೆಯನ್ನು ಲೆಕ್ಕಿಸದೆ ತರಾತುರಿಯಲ್ಲಿ ಮತ್ತು ನನ್ನ ಗೈರುಹಾಜರಿಯಲ್ಲಿ ವಿಚಾರಣೆ ಮಾಡಿಕೊಂಡು ಕೆಲಸದಿಂದ ತೆಗೆದು ಹಾಕಿದ್ದೇನೆಂದು ಸಾಫ್ ಸೀದಾ ನನ್ನ ಮನೆಗೆ ವಿಶೇಷ ದೂತನ ಮೂಲಕ ನೋಟಿಸ್ ಕಳುಹಿಸಿದರು. ಈ ಒಂದು ಸಂಚಿನಲ್ಲಿ ಒಟ್ಟು 12 ಮಂದಿ ಉನ್ನತ ಅಧಿಕಾರಿಗಳು ಶಾಮೀಲಾಗಿದ್ದಾರೆ. ವಾಸ್ತವವಾಗಿ ಕಾನೂನು ಪ್ರಕಾರ ವಿಚಾರಣೆಯೂ ಆಗಲಿಲ್ಲ. ಅಂದರೆ ವಿಚಾರಣೆ ಇದೂವರೆಗೂ ಪ್ರಾರಂಭವೇ ಆಗಲಿಲ್ಲ. ಸಾಕ್ಷಿಗಳನ್ನು ವಿಚಾರಣೆ ಮಾಡಲಿಲ್ಲ. ನನ್ನಲ್ಲಿರುವ ದಾಖಲೆಗಳನ್ನು ಪರಿಶೀಲಿಸಿಲ್ಲ. ನನ್ನನ್ನು ಸಸ್ಪೆಂಡ್ ಸಹಾ ಮಾಡಲಿಲ್ಲ. ಯಾವ ಭತ್ಯವನ್ನು ನೀಡಲಿಲ್ಲ. ಎಲ್ಲಾ ವ್ಯವಹಾರಗಳೂ ಕಣ್ಣೊರೆಸುವ ಒಂದು ತಂತ್ರ. ಅಧಿಕಾರ ದುರುಪಯೋಗದ ಪರಮಾವಧಿ".

ಈಗ ಗೋಪಾಲ್ ತಮಗೆ, ತಮ್ಮ ಸಂಘಕ್ಕೆ ಸರಕಾರದಿಂದ ನ್ಯಾಯ ದೊರಕಬೇಕು ಎಂದು ವಿಧಾನ ಸೌಧದ ಮುಂದೆ ಧರಣಿ ಸತ್ಯಾಗ್ರಹ ಪ್ರಾರಂಭಿಸಿದರು. ಅವರು ಸತ್ಯಾಗ್ರಹವನ್ನು ಆರಂಭಿಸಿ ನೂರಾರು ದಿನಗಳು ಕಳೆದರೂ ಅವರ ಕೂಗು ಸರಕಾರಕ್ಕೆ ಮುಟ್ಟಲಿಲ್ಲ. ಶ್ರೀ ರಾಮಕೃಷ್ಣ ಹೆಗಡೆಯವರ ನೇತೃತ್ವದ ಸರಕಾರ ಕರ್ನಾಟಕದಲ್ಲಿಯೇ ಇಲ್ಲಿಯವರೆಗೂ ಆಗಿ ಹೋದ ಸರಕಾರಗಳಲ್ಲಿ ಉತ್ತಮ ಸರಕಾರ ಎಂದು ಎಲ್ಲರ ನಂಬಿಕೆ ನಿಜ. ಆದರೆ ಗೋಪಾಲ್‌ರ ಪ್ರಕರಣ ಇದನ್ನು ಹುಸಿಯಾಗಿಸಿದರೆ ಆಶ್ಚರ್ಯವಿಲ್ಲ. ಕರ್ನಾಟಕದಲ್ಲಿ ಯಾವುದೇ ಮೂಲೆಯಲ್ಲಿ ಯಾವುದೇ ದಲಿತನಿಗೆ ಅನ್ಯಾಯವಾದರೂ ಅದನ್ನು ರಾಜ್ಯಮಟ್ಟದ ಸಮಸ್ಯೆಯಾಗಿ ತೆಗೆದುಕೊಂಡು ಜನರ ಗಮನ, ಸರಕಾರದ ಗಮನ ಸೆಳೆದು ನ್ಯಾಯ ದೊರಕಿಸಲು ಪ್ರಯತ್ನಿಸುವ ದಲಿತ ಸಂಘರ್ಷ ಸಮಿತಿಯೂ ದಲಿತ ಗೋಪಾಲರ ಬಗ್ಗೆ ಮೌನವಹಿಸಿದ್ದು ಅತ್ಯಂತ ನೋವಿನ ಸಂಗತಿ. ನಮ್ಮ ಬುದ್ಧಿಜೀವಿಗಳ ಬೌದ್ಧಿಕ ದಿವಾಳಿತನಕ್ಕೆ ಸಾಕ್ಷಿ.

ಗೋಪಾಲರ ಹೇಳಿಕೆಯ ಕೊನೆಯ ಭಾಗ ಹೇಳುತ್ತದೆ. "ನಾನು ಬಡವ. ಒಬ್ಬ ಬಡ ಹರಿಜನ ವ್ಯಕ್ತಿ. ಕಾಳಹಣ, ಅಧಿಕಾರ, ಅಂತಸ್ತುಗಳಿಗೆ ಆಸೆ ಪಡುವವನಲ್ಲ. ಅಂತಹ ಆಸೆಯಿದ್ದಿದ್ದರೆ ಎಂ. ಜಯರಾಜ್‌ರೊಂದಿಗೆ ಶಾಮೀಲಾಗಿ ಲಕ್ಷಾಧಿಪತಿಯಾಗುತ್ತಿದ್ದೆ. ಅದು ನನಗೆ ಬೇಕಿಲ್ಲ. ನನಗೆ ನ್ಯಾಯ ಬೇಕು. ನಾಲ್ಕು ವರ್ಷಗಳಿಂದ ನಾನು ಅನ್ನ ನೀರಿಲ್ಲದೆ ನೊಂದಿರುತ್ತೇನೆ. ಈ ಹೋರಾಟದಲ್ಲಿ ತಂದೆಯನ್ನು ಕಳೆದು ಕೊಂಡಿರುತ್ತೇನೆ" ಎಂದು ಹೇಳುವ ಅವರು ಕೊನೆಯದಾಗಿ ನ್ಯಾಯ ಸಿಗಲಿಲ್ಲವೆಂದರೆ ನನ್ನಲ್ಲಿರುವ ದಾಖಲೆ ಪತ್ರಗಳನ್ನೆಲ್ಲಾ ಸುಪ್ರೀಂ ಕೋರ್ಟ್ ನ್ಯಾಯಾಪೀಠಕ್ಕೆ ಕಳುಹಿಸಿ ಆತ್ಮಾರ್ಪಣೆ ಮಾಡಿಕೊಳ್ಳಬೇಕಾಗುತ್ತದೆ ಎನ್ನುತ್ತಾರೆ.